# ನಾರ್ವೆ

ಒಂದಾನೊಂದು ಕಾಲದಲ್ಲಿ ನಾರ್ವೆ ದೇಶದ ಒಂದೂರಿನಲ್ಲಿ ಕಾರಿ ಎಂಬ ಹೆಸರಿನ ಪುಟ್ಟ ಹುಡುಗಿ ಒಬ್ಬಳು ಇದ್ದಳು. ಅವಳು, ಅವಳ ತಂಗಿಯರು, ತಮ್ಮಂದಿರು, ತಾಯಿ ತಂದೆ, ಎಲ್ಲರೂ ಒಂದು ಅಚ್ಚುಕಟ್ಟಾದ ಕೆಂಪು ಮನೆಯಲ್ಲಿ ವಾಸಿಸುತ್ತಿದ್ದರು.



ಒಂದು ದಿನ, ಅವರಮ್ಮ ಪೇಟೆಗೆ ಹೋಗಬೇಕಾಯಿತು; "ನಾನು ಪೇಟೆಗೆ ಹೋದಿರುವಾಗ ಒಲೆಯ ಮೇಲಿಟ್ಟಿರುವ ಮಗುವಿನ ಅಂಬಲಿಯನ್ನು ಸ್ವಲ್ಪ ಕದಡಬೇಕಮ್ಮ ಸೀದು ಹೋಗದೆ ನೋಡಿಕೊ ತಾಯಿ," ಎಂದು ಕಾರಿಯನ್ನು ಕರೆದು ಹೇಳಿದಳು "ಆಗಲಮ್ಮ" ಎಂದು ಕಾರಿಯು ಉತ್ತರವಿತ್ತು; ಅಮ್ಮನನ್ನು ಕಳುಹಿಸಿಕೊಟ್ಟು ಅಂಬಲಿಯನ್ನು ಕದಡುತ್ತಿದ್ದಳು. ಆಗ, ಅವಳಿಗೆ ತನ್ನ ಸೊಗಸಾದ ಜಡೆಯ 'ರಿಬ್ಬನಿನ' ಬಗ್ಗೆ ಯೋಚನೆ ಬಂತು. "ಆ ಜಡೆಯ ರಿಬ್ಬನ್ನಿನನ್ನು" ಎಲ್ಲಿಟ್ಟಳೆಂಬುದು ಅವಳಿಗೆ ಮರೆತು ಹೋಯಿತು. ಅದರ ಮಾರುದಿನ

ಅವಳ ಹುಟ್ಟಿದ ಹಬ್ಬ. ಹುಟ್ಟಿದ ಹಬ್ಬದ ಪಾರ್ಟಿಗೆ ಆ ರಿಬ್ಬನನ್ನು ಜಡೆಗೆ ಹಾಕಿ ಮುಡಿದುಕೊಳ್ಳಬೇಕೆಂದು ಅವಳಿಗೆ ಇಷ್ಟ ಪಾಪ. ಸರಿ ಕಾರಿಯು ಗಂಜಿಯನ್ನು ಗೊಟಾಯಿಸಲು ಮರೆತು, ಇತ್ತ ಬಂದಳು. ತನ್ನ ಮೇಜಿನ ಎಲ್ಲಾ ಡ್ರಾಯರನ್ನು ಒಂದೊಂದನ್ನಾಗಿ ತೆರೆದು ಆ ರಿಬ್ಬನನ್ನು ಹುಡುಕಿದಳು. ರಿಬ್ಬನ್ ಅಂತೂ ಸಿಗಲಿಲ್ಲ. ಮನೆಯೆಲ್ಲ ಗಲೀಜು ಆಯಿತಷ್ಟೇ. ಕಾರಿಯು ರಿಬ್ಬನನ್ನು ಹುಡುಕುವ ಮುಜುಗರ ದಲ್ಲಿ, ಡ್ರಾಯರುಗಳಲ್ಲಿದ್ದ ಉಡುಗೆ ತೊಡಿಗೆ ಮತ್ತು ಇತರ ವಸ್ತು ಗಳೆಲ್ಲವನ್ನೂ ಹೊರತೆಗೆದು ಬಿಸುಟು, ಚೆಲ್ಲಾಡಿದ್ದಳು.

ಅವಳ ತಾಯಿ ಮನೆಗೆ ಬಂದಾಗ, ಮನೆ ಪೂರ್ತಿ 'ಗುಂ' ಎಂದು ಗಂಜಿ ಸೀದ ವಾಸನೆ ತುಂಬಿತ್ತು. "ಐಯ್ಯೋ" ಎಂತಹ ದಡ್ಡಿ ನೀನು! ಈ ಸಣ್ಣ ಕೆಲಸವನ್ನೂ ಸಹ ನಿನ್ನನ್ನು ನಂಬಿ ಬಿಡಲಾರೆನಲ್ಲಾ ಎಂದು ಅವಳ ತಾಯಿ ರೇಗುತ್ತ ಅಡಿಗೆಯ ಮನೆಗೆ ಓಡಿದಳು. ಕಾರಿಯು "ಅಮ್ಮ" ನೀನು, ಯಾವಾಗಲೂ ನನ್ನನ್ನು ಕಾಡುತ್ತಿತ್ತು, ಅದಕ್ಕೇ ಮತ್ತೆ ನನಗೆ ಯಾವುದೂ ನೆನಪಿರುವುದಿಲ್ಲ ಎಂದು ಉತ್ತರವಿತ್ತಳು.

ಅಡಿಗೆಯ ಮನೆಯಿಂದ ಅವಳ ಅಮ್ಮನು "ಮನೆ ಪೂರ್ತಿ ಬಟ್ಟೆ ಗಳನ್ನು ಚೆಲ್ಲಾಡಿರುವಿ ಎಲ್ಲವನ್ನು ಆಯಾ ಡ್ರಾಯರಿನೊಳಕ್ಕೆ ಚೊಕ್ಕಟ ವಾಗಿ ಜೋಡಿಸಿಡು ಮತ್ತೆ. "ಕಾರಿ" ಬಲ್ಲೆ ನಾನು ಎಲ್ಲಾದರೂ ಓಡಿ ಹೋಗುತ್ತೇನೆ. ಅಷ್ಟೆ" ಎಂದು ಕಿರುಚಿದಳು.

ಅರ್ಧ ರಾತ್ರಿಯ ಸಮಯ, ಚಂದ್ರನು ನೀಲಾಕಾಶದಲ್ಲಿ ತೇಲು ತ್ತಿದ್ದನು. ಮರಗಳ ಮರೆಯಿಂದ ವಿಚಿತ್ರವಾದ ಧ್ವನಿಯೊಂದು "ರೂ...ಊ...ಹೂ...ಊ... ಉಂ" ಎಂದು ಕೇಳಿಬಂತು. ಚಂದ್ರನು ಕೆಳಗೆ ಬಗ್ಗಿ ನೋಡಿದನು. ಅಲ್ಲೊಂದು ದೇವದಾರು ಮರ. ಅದರ

ಮೇಲೆ ದೊಡ್ಡದೊಂದು ಪಕ್ಷಿ ಕುಳಿತ್ತಿತ್ತು. ಅದೊಂದು ತಾಯಿ ಗೂಬೆ! ಮರದ ಕೆಳಗೆ ಒಬ್ಬ ಪುಟ್ಟ ಹುಡುಗಿಯು ಕುಳಿತಿದ್ದಳು. ಅವಳು ತನ್ನ ಕೈಗಳಿಂದ ಮುಖವನ್ನು ಮುಚ್ಚಿಕೊಂಡು ಅಳುತ್ತ ಕುಳಿತ್ತಿದ್ದುದನ್ನು ಆ ಪಕ್ಷಿಯು ದಿಟ್ಟಿಸಿ ನೋಡುತ್ತಿತ್ತು. ಪಾಪ, ಆ ಹುಡುಗಿಯು ಮೈ ಥರಥರನೆ ನಡುಗುತ್ತಿತ್ತು. ಆ ತಾಯಿ ಗೂಬೆಯು ಅವಳಿಗೆ ಸಹಾಯ ನೀಡಬೇಕೆಂದು ಬಯಸಿ ಒಂದು ಪುಟ್ಟ ಬೂದು ಬಣ್ಣದ ಗೂಬೆಯನ್ನು ಕರೆದು, ಅದಕ್ಕೆ ಏನನ್ನೋ ಹೇಳಿ ಅವಳ ಹತ್ತಿರ ಕಳುಹಿಸಿತು. ಆದರೆ ಆ ಪುಟ್ಟ ಹಕ್ಕಿಯು ಕೋಮಲವಾದ ರೆಕ್ಕೆಗಳಿಂದ ಕಾರಿಯ ಕೆನ್ನೆಗಳಿಗೆ ಕಚಗುಳಿ ಮಾಡಿದಾಗ, ಅವಳು ಬೆದರಿ ಹೋಗಿ ಚಂಗನೆ ಹಾರಿದಳು. ಆಗ, ಆ ಸಣ್ಣ ಗೂಬೆಯು "ಹೆದರಬೇಡ ಕಾರಿ" ಎಂದು ಧೈರ್ಯ ಹೇಳುತ್ತ ಅವಳ ತೋಳ ಮೇಲೆ ಮೆಲ್ಲಗೆ ಕುಳಿತುಕೊಂಡಿತು. "ನನ್ನನ್ನು ಈ ಮರದ ಮೇಲಿರುವ ಗೂಬಮ್ಮ ನಿನ್ನ ಬಳಿ ಕಳುಹಿಸಿದಳು. ನಿನಗೇನಾದರೂ ಸಹಾಯ ಬೇಕೆ, ಎಂದು ಕೇಳಿಬಾರೆಂದು ನನ್ನನ್ನು ಕಳುಹಿಸಿದ್ದಾಳೆ. ಆಕೆ ಬಹಳ ಒಳ್ಳೆಯವಳು" ಎಂದು ಮೆಲುನುಡಿಯಲ್ಲಿ ಮಾತನಾಡಿತು.



ಕಾರಿಯು ಆ ಕಾಡಿನೊಳಗೆ ದಾರಿತಪ್ಪಿ ಬಂದುಬಿಟ್ಟಿದ್ದಳಾದುದರಿಂದ ಬಹಳ ಹೆದರಿದ್ದಳು. ಆದರೆ ಅವಳಿಗೆ, ಈ ಸಣ್ಣ ಗೂಬೆಯನ್ನು ನೋಡಿ, ಅದರ ಹಿತವಚನವನ್ನು ಕೇಳಿ, ವಿಪರೀತ ಆಶ್ಚರ್ಯವಾಯಿತು. ಅದನ್ನು ಕುರಿತು ಕಾರಿಯು "ನೀನು ಎಂತಹ ಹಕ್ಕಿ" ಎಂದು ಕೇಳಿದಳು.

ಹಕ್ಕಿ 'ನಾನೊಂದು ಸಣ್ಣ ಗೂಬೆ' ತಾಯಿ ಗೂಬಮ್ಮನು ಎಲ್ಲ 'ಫಿಂಜೆಸ್' ಪಕ್ಷಿ (ಪುಟ್ಟ ಮೈನಾ ಪಕ್ಷಿಗಳಂತಹವು)ಗಳನ್ನೂ ಸಭೆ ಸೇರಿಸಿದಾಗ, ನಾನು ಆಗಾಗ್ಗೆ ನನ್ನ ಕೈಲಾಗುವಷ್ಟು ನೆರವಾಗುತ್ತೇನೆ. ಆ ಪುಟಾಣಿ ಪಕ್ಷಿಗಳು ಅದೆಷ್ಟು ಬಣ್ಣಗಳಲ್ಲಿ ಅದೆಷ್ಟು ಸುಂದರವಾಗಿರುತ್ತವೆ ಅಲ್ಲವೇ ? ಹಿಂದೂ ದೇಶದವರು ಇವನ್ನು ಬಹುಶಃ ಮೈನಾ ಪಕ್ಷಿಗಳೆಂದು ಕರೆಯುತ್ತಾರೆಂದು ತೋರುತ್ತದೆ.

ಕಾರಿ ತಾಯಿ ಗೂಬೆಯು ಗೂ ಉ ಊ ಹೂ ಊ ಊ ಎಂದು ಕೂಗಿದರೆ ಬಹಳ ಕರ್ಕಶವಾಗಿದೆಯಪ್ಪ, ನನಗಂತೂ ಅದನ್ನು ಕೇಳಿ ಬಹಳ ಹೆದರಿಕೆಯಾಯಿತು. ಅದಕ್ಕೆ 'ಬಹಳ ಸಿಟ್ಟು ಬಂದಿದೆಯೇನು ? "ಪುಟ್ಟ ಗೂಬೆ" ಇಲ್ಲವಲ್ಲಾ, ಆಕೆ, ಬಹಳ ಒಳ್ಳೆಯವಳು. 'ಫಿನ್‌ಜಸ್' ಪಕ್ಷಿಗಳಂತೂ ಆಕೆಯೊಡನೆ ಬಹಳ ತಮಾಷೆಯಾಗಿ ಆಟವಾಡುತ್ತಿರುತ್ತವೆ. ಆಕೆ ಅವುಗಳಿಗೆ ಹಲವು ವಿನೋದಗಳನ್ನು ಹೇಳಿಕೊಡುತ್ತಾಳೆ, ನೀನು ಮರದ ಮೇಲೆ ಹತ್ತಿ ಬಂದು, ಆಕೆಯೊಡನೆ ಮಾತನಾಡು, ಬಾ ಎಂದು ಕರೆಯಿತು.

ಕಾರಿಯು ಮೆಲ್ಲಮೆಲ್ಲಗೆ ಮರವನ್ನು ಹತ್ತಿ, ತಾಯಿ ಗೂಬೆಯ ಸಮೀಪ ಹೋದಳು. ಅವಳಂತೂ ಅಷ್ಟಾಗಿ ಧೈರ್ಯದಿಂದ ಮರ

ಹತ್ತಲಿಲ್ಲವೆನ್ನಿ. ಆದರೆ ಆ ಗೂಬೆಯನ್ನು ಕಂಡ ಬಳಿಕ ಬಹು ಬೇಗನೆ ತನ್ನ ಮನೆಯಲ್ಲಿ ತನ್ನ ತಾಯಿ ತಂದೆಯವರೊಡನೆ ಸುಖವಾಗಿರುವಂತೆಯೇ ಅವಳಿಗೆ ಸಂತೋಷವೇರ್ಪಟ್ಟಿತು. ಆ ಗೂಬಮ್ಮನ ಮೃದುವಾದ, ಬೆಚ್ಚನೆಯ ರೆಕ್ಕೆಗಳ ಮೇಲೆ ಒರಗಿಕೊಂಡು, ತಾನು ತನ್ನ ಮನೆಯನ್ನು ಬಿಟ್ಟು ಬಂದುದು ಗಂಜಿಯನ್ನು ಸೀಸಿದ್ದು ತನ್ನ ಜಡೆಯ 'ರಿಬ್ಬನ್' ಸಿಗದೇ ಹೋದುದು ಇವೆಲ್ಲ ವಿಷಯಗಳನ್ನೂ ಆದಕ್ಕೆ ಸಾಂಗವಾಗಿ ಹೇಳಿದಳು.

ಗೂಬಮ್ಮ ಸರಿಯಮ್ಮ ಆದರೆ, ಈ ಅರ್ಧ ರಾತ್ರಿಯಲ್ಲಿ ನಿನ್ನ ಅಂತಕವನ್ನು ಶಮನಗೊಳಿಸಲು ಸಾಧ್ಯವಿಲ್ಲ. ಹೊತ್ತು ಮೀರಿದೆ. ಬೆಳಕು ಹರಿಯುವ ವರೆವಿಗೆ ನನ್ನೊಡನೆ ತಂಗು, ಬೆಳಿಗ್ಗೆ ನನ್ನ ಮೈನಾಗಳೆಲ್ಲವನ್ನೂ ಸಂಧಿಸುವೆಯಂತೆ ಎಂದು ಕಾರಿಯನ್ನು ಸಂತೈಸಿತು.

ಆ ದೇವದಾರು ವೃಕ್ಷದ ಪೊಟರೆಯ ಕೊರಡಿನೊಳಗೆ 'ಕಾರಿಯು' ಮಲಗಿ, ಬೆಳಕು ಹರಿಯುವ ತನಕ ಸುಖವಾಗಿ ನಿದ್ರೆ ಮಾಡಿದಳು.



ಅದರ ಮರುದಿನ ಮುಂಜಾನೆಯೇ ಸೂರ್ಯ ರಶ್ಮಿಗಳು ಎಲೆಗಳ ಸಂದಿನ ಮೂಲಕ ನುಸುಳಿಕೊಂಡು ಬಂದು. ಅತಿಶಯ ರೀತಿಯಲ್ಲಿ ಅವಳನ್ನು ಕಚಗುಳಿಗೊಳಿಸಲು, ಅವಳು ಬಹು ಬೇಗ ಎಚ್ಚೆತ್ತಳು.

ಕಾರಿಯು, "ಸೂರ್ಯರಶ್ಮಿಗಳು ಇಲ್ಲಿ ಯಾಕೋ ವಿಚಿತ್ರವಾಗಿವೆ" ಎಂದು ತನ್ನಷ್ಟಕ್ಕೆ ಹೇಳುತ್ತ ನಕ್ಕಳು. ಆ ಬಳಿಕ ಪೊಟರೆಯಿಂದ ಮೆಲ್ಲಗೆ ತೆವಳಿಕೊಂಡು ಬಂದು ತಾಯಿ ಗೂಬೆಯ ಹತ್ತಿರ ಆತುಕೊಂಡು ಕುಳಿತಳು. ಆಗ, ಒಂದು ಮೊಲವು ಚಿಮ್ಮುತ್ತ ಅಲ್ಲಿ ಹಾರಿಬಂತು. ಮಂಜಿನ ಹನಿಗಳು ಮುಂಜಾನೆಯ ಸ್ನಾನ ವೃಷ್ಟಿಯಂತೆ ಆ ಮೊಲದ ಮೇಲೆ ವರ್ಷಿಸಿತು. ಅದು 'ಬಟರ್ ಕಪ್' ಎಂಬ ಒಂದು ಬಗೆಯ ಹಳದೀ ಬಣ್ಣದ ಹೂವನ್ನು ಕಿತ್ತು ತಂದು ಹಲ್ಲುಜ್ಜಿಕೊಂಡಿತು. "ಕಾರಿಯು ನಾನು ಆ ಹೊಳೆಯ ಹತ್ತಿರ ಹೋಗಿ, ಹಲ್ಲುಜ್ಜಿ ಮುಖ ತೊಳೆದು ಬರುತ್ತೇನೆ," ಎಂದು ಹೇಳಿ ಹೊಳೆಗೆ ಹೊರಟಳು.

ಕಾರಿಯು ಹಿಂತಿರುಗಿ ಬಂದಾಗ ಆ ಪುಟಾಣಿ ಮೊಲದಂತೆಯೇ ಅವಳೂ ಕೂಡ ಆನಂದವಾಗಿ ಪರಿಶುದ್ಧವಾಗಿ, ಪ್ರಕಾಶವಾಗಿ ತೋರಿ ಬಂದಳು. ಇದೀಗ ಕಾರಿಗೆ ತಿಳುವಳಿಕೆ ಮೂಡಿತು. "ಬೆಳಕುಹರಿದ ಬಳಿಕವೂ, ಹಾಸಿಗೆಯಲ್ಲಿ ಬಹಳ ಹೊತ್ತು ಮಲಗಿರುವುದು ಶುದ್ಧ ಮೂಢ್ಯ" ಎಂದು ನುಡಿದಳು.

ತಾಯಿ ಗೂಬೆ, ಎಂದೂ ದಿನದ ಬೆಳಗ್ಗಿನ ಜಾವವೇ ಅತ್ಯುತ್ತಮ ವಾದ ವೇಳೆ. ಆದರೆ, ಸ್ವಲ್ಪ ಹೊತ್ತು ಕುಳಿತುಕೋ ಇದೀಗ ಒಂದು

ಆಶ್ಚರ್ಯವನ್ನು ಕಾಣುವಿಯಂತೆ ಎಂದು ನುಡಿಯಿತು. ಕಾರಿಯು 'ಸರಿ' ಎಂದು ತಲೆಯಲ್ಲಾಡಿಸಿ ಉಸಿರು ಹಿಡಿದುಕೊಂಡು, ಅಲ್ಲಾಡದೆ ಕುಳಿತುಕೊಂಡಳು. ಆಗ, ಅವಳ ಕಣ್ಣೆದುರಿಗೆ ಹಸಿರು ಹುಲ್ಲುಗಾವಲಿನ ನಡುವೆ ದೊಡ್ಡದೊಂದು ನಾಯಿಕೊಡೆ ಬೆಳೆದುನಿಂತಿತ್ತು.





ಗುಂಪುಗುಂಪಾಗಿ ಬಣ್ಣ ಬಣ್ಣದ ಪುಟಾಣಿ ಹಕ್ಕಿಗಳು ಬುರ್ ರ್ ರ್ ರ್ ರ್ ಎಂದು ಹಾರಿಬರುವ ಶಬ್ದವು ಕಾರೀಗೆ ಕೇಳಿಸಿತು. ಆ ಕೂಡಲೇ ಆ ಮೈದಾನದಲ್ಲಿ ಭರ್ತಿ ಎಂಬ ನಾರ್ವೇ ದೇಶದ ಮೈನಾ ಪಕ್ಷಿಗಳು ಹಿಂಡು ಹಿಂಡಾಗಿ ಬಂದು ಇಳಿದವು. ಆಗ ಕಾರಿಯು ತಲೆಯ ಮೇಲೆ, ಸಿಟ್ ಸಿಟ್ ಜ್ಸೆಫ್ ಜ್ಸೆಫ್ ಫಿಂಕ್ ಕಿರ್ ಕಿರ್ ಎಂಬ ಇಂಪಾದ ಹರ್ಷದ ಧ್ವನಿಯು ಕೇಳಬಂತು. ಅಲ್ಲಿ ಜರುಗುತ್ತಿರುವ ಸಂಭ್ರಮ ವೆಲ್ಲವೂ ಕಾರಿಗೆ ಆನಂದದಾಯಕವಾಗಿರಲು, ಅವಳೂ ಅವಕ್ಕೆ ಹರ್ಷ ಸೂಚಿಸಿದಳು.

ನಾಲ್ಕು ಸಣ್ಣ ನಾರ್ವೇಜಿಯ ಮೈನಾದ ಹಕ್ಕಿಗಳು ತಾವು ಕಲಿತಿರುವ ಹಾರಾಡುವ ಜಾಣ್ಮೆಯನ್ನೂ ಪಾಠವನ್ನೂ ಹಾರುತ್ತ ಹಾರುತ್ತ ಅಭ್ಯಾಸಿಸಿದವು. ಅದನ್ನು ನೋಡಿ, ಕಾರಿಯು ಕೈ ಚಪ್ಪಾಳೆ ತಟ್ಟುತ್ತ 'ನೀವೆಷ್ಟು ಜಾಣರು!' ಎಂದು ಹೊಗಳಿದಳು.

"ನೀನು ಹೇಳುವುದು ಸರಿಯೇ" ಎಂದೆನ್ನುತ್ತ ಅವುಗಳಲ್ಲಿ ಒಂದು ಹಕ್ಕಿಯು ಹಾರಿಬಂದು ಅವಳ ಕೈ ಮೇಲೆ ಕುಳಿತುಕೊಂಡಿತು. "ನಾವೆಲ್ಲರೂ ಸಣ್ಣ ರೆಕ್ಕೆಯನ್ನೂ, ದೊಡ್ಡ ರೆಕ್ಕೆಯನ್ನೂ ಪಡೆದಿದ್ದೇವೆ" ಎಂದು ಅದು ಹೇಳಿತು. ಆ ವೇಳೆಗೆ ಬಾಕಿ ಮೂರು ಹಕ್ಕಿಗಳೂ ಹಾರಿ ಬಂದು ಕಾರಿಯ ತೊಡೆಯ ಮೇಲೆ ಕುಳಿತುಕೊಂಡವು. ನಿಮ್ಮ ರೆಕ್ಕೆಗಳೆಲ್ಲವೂ ಒಂದೇ ಸಮ ಇವೆ! ಎಂದಳು ಕಾರಿ.

ಆ ನಾಲ್ಕು ಹಕ್ಕಿಗಳಲ್ಲಿ ಒಂದು ನೀನನ್ನುವುದೂ ಸರಿಯೇ. "ನಾವು ಹಾರಾಡುವ ವಿದ್ಯೆಯಲ್ಲಿ ಪಾರಂಗತರಾದೆವೆಂದೂ ಗೂಬಮ್ಮನು ನಮಗೆ "ಸಣ್ಣ ರೆಕ್ಕೆ" "ದೊಡ್ಡ ರೆಕ್ಕೆ" ಎಂಬ ಎರಡು ಬಿರುದುಗಳನ್ನು ದಯಪಾಲಿಸಿದ್ದಾರೆ, ಎಂದು ಹೇಳಿದವಷ್ಟೆ ಎಂದು ವಿಶದವಾಗಿ ನುಡಿಯಿತು.



ಕಾರಿಯು ಆ ಪುಟಾಣಿ ಹಕ್ಕಿಯ ಮೃದುವಾದ ಕಪ್ಪು ತಲೆಯನ್ನು ತನ್ನ ತೋರುಬೆರಳಿನಿಂದ ಪ್ರಿಯವಾಗಿ ಮುಟ್ಟಿ, ಮುದ್ದು ಮಾಡಿದಳು. ಅದೊಂದು ನೀಲಿ ಬಣ್ಣದ ಹಕ್ಕಿ ಅದರ ಎದೆಯ ಭಾಗ ಹಳದಿಯಾಗಿತ್ತು.

ಕಾರಿಯ ಬೆರಳ ಮೇಲೆ ನಲಿದಾಡಿದ ಆ ನೀಲಿ ಹಕ್ಕಿಯು, "ನಮ್ಮ ಹಿಂಡಿಗೆ ನಮ್ಮವರಲ್ಲೇ ಒಬ್ಬರು ಮುಖಂಡರು. ಅಥವಾ ಮಾರ್ಗ ದರ್ಶಕರಾಗುತ್ತೇವೆ." ಎಂದು ಹಕ್ಕಿಯ ಭಾಷೆಯಲ್ಲಿ ಚಿಲಿಪಿಲಿ ಗುಟ್ಟುತ್ತಾ ತನ್ನ ಚೆಲುವಾದ ರೆಕ್ಕೆಗಳನ್ನು ಹೆಮ್ಮೆಯಿಂದ ಒದರಿತು. ಪುನಃ ಅದು ಮಾತಿಗೆ ಶುರುಮಾಡಿತು. "ಅಗೋ ! ಬ್ಲೂಬೆಲ್ಸ್ ಹೂವಿನ ಪೊದೆಗಳಾಚೆ ಕುಳಿತಿವೆಯಲ್ಲಾ; ಅವೇ ನಮ್ಮ ಹಿಂಡು ಅವೆಲ್ಲಾವೂ ಮನಬಂದಂತೆ ಸಿಕ್ಕಾಪಟ್ಟೆ ಹಾರಾಡುತ್ತಿರುತ್ತವೆ. ಆದರೆ ಈ ಗಲಾಟೆಯ ಹಕ್ಕಿಗಳೆಲ್ಲವೂ ಇಲ್ಲಿ ಗುಂಪು ಸೇರಿದಾಗ, ನಾವು ಗೂಬಮ್ಮನಿಗೂ ಅವಳ ಇಬ್ಬರು ಸಹಾಯಕ ಸಣ್ಣ ಗೂಬೆಗಳಿಗೂ ನೆರವು ನೀಡುತ್ತೇವೆ" ಎಂದು ಹೇಳಿತು.

ಆ ನಾಲ್ಕು ಹಕ್ಕಿಗಳಲ್ಲಿ ಒಂದು ಹಠಾತ್ತನೆ ಹಾರಿಬಂದು ಕಾರಿಯ ತಲೆಯ ಮೇಲೆ ಕುಳಿತುಕೊಂಡು, "ನನ್ನನ್ನು ಈ ಹೊತ್ತು ಹಾಡಿನ ಪದಕ್ಕಾಗಿ ಪರೀಕ್ಷಿಸುತ್ತಾರೆ, ನಾನು ಈಗ ನಿನಗಾಗಿ ಒಂದು ಹಾಡನ್ನು ಹಾಡಲೆ ?" ಎಂದು ಚಿಲಿಪಿಲಿಗುಟ್ಟುತ್ತ ತನ್ನ ಭಾಷೆಯಲ್ಲಿ ಹೇಳಿತು. ಆದರೆ ಇತರ ಹಕ್ಕಿಗಳಿಗೆ ಇದರ ಮಾತು ಅಷ್ಟಾಗಿ ಸರಿಹೋಗಲಿಲ್ಲ.

ಪುನಃ ಆ ಹಕ್ಕಿ ಹೀಗೆ ನುಡಿಯಿತು. "ನಿನಗೆ ಈ ವಿಷಯ ತಿಳಿದಿರ ಬಹುದು ಗೂಬಮ್ಮ ಇಲ್ಲಿ ಇದ್ದು ಈ ಹಾಡನ್ನು ಲಾಲಿಸಬೇಕು, ಮತ್ತೆ ಮತ್ತೆ, ಇದೇ ಸಮಯ ನನ್ನ ಹಿಂಡಿನ ಹಕ್ಕಿಗಳೆಲ್ಲಕ್ಕೂ ನನ್ನ ಅವಶ್ಯ ಕತೆಯೂ ಇದೆ! ನೋಡಿಲ್ಲಿ! ಅವು ಅದೆಷ್ಟು ಗಲಾಟೆ ಮಾಡುತ್ತಿವೆ "ದೊಡ್ಡ ಅಕ್ಕ"ನ ಇದೊಂದು ಬಿರುದು ಪದಕವನ್ನು ನಾನು ಪಡೆಯುವು ದಕ್ಕೆ ಮುಂಚೆ ನನ್ನಿಂದ ಈ ಹಿಂಡನ್ನು ಹತೋಟಿಯಲ್ಲಿಡಲು ಸಾಧ್ಯವೇ ಆಗುತ್ತಿರಲಿಲ್ಲ. ಕಾರಿ ಅಕ್ಕ! ಈ ಪದಕವನ್ನು ಪಡೆಯಬೇಕಾದರೆ ನನಗೆಷ್ಟೋ ಅನುಭವ ಬೇಕಿತ್ತು".

ಈ ನಾಲ್ಕರಲ್ಲಿ ಮತ್ತೊಂದು ಹಕ್ಕಿಯು "ನನಗೆ ಯಾವಾಗಲೂ ಸಾಧುವಾದ ಗುಂಪೇ ಸಿಗುತ್ತೆಯಾದುದರಿಂದ ನನಗೆ ಬಹಳ ಸಂತೋಷ! ಆದರೆ ಈಗ ನನ್ನ ಗುಂಪಲ್ಲಿ ಇರುವ ಒಂದು ಹಕ್ಕಿಯ ವಿಷಯವಾಗಿ ಮಾತ್ರ ನನಗೆ ವಿಪರೀತ ಚಿಂತೆ ಹತ್ತಿದೆ. ಯಾರೋ ದುರಾತ್ಮರು ಅದರ ಮೇಲೆ ಕಲ್ಲು ಎಸೆದು, ಅದರ ಕಾಲನ್ನು ತುಂಬಾ ಗಾಯಗೊಳಿಸಿ ದ್ದಾರೆ" ಎಂದು ನೊಂದುಕೊಂಡಿತು.

ಆ ನಾಲ್ಕು ಸಣ್ಣ ಹಕ್ಕಿಗಳೂ ತಾವು ಇತರರಿಗೆ ಸಾಧ್ಯವಾದಷ್ಟು ಸಹಾಯ ಮಾಡುತ್ತೇವೆಂಬದಾಗಿ ಪ್ರಮಾಣ ಸ್ವೀಕರಿಸಿರುವುದಾಗಿ ಕಾರಿಗೆ ತಿಳಿಸಿದವು ಆದ್ದರಿಂದ ಆ ಕುರುಡು ಹಕ್ಕಿಗೆ ಹಿಂದಿನ ಇತರ ಪಕ್ಷಿಗ ಳೆಲ್ಲವೂ, ದಯೆ ತೋರಿಸಬೇಕೆಂದು ತಾನು ಹೇಳಿರುವುದಾಗಿ ಆ ಒಳ್ಳೆಯ ಹಕ್ಕಿಯು ಕಾರಿಯ ಹತ್ತಿರ ಹೇಳಿ ತನ್ನ ಮಾತು ಮುಗಿಸಿತು.

ತಾಯಿ ಗೂಬೆಯು ತನ್ನ ಇಬ್ಬರು ಸಂಗಾತಿಯರೊಡನೆ ಹಾರಿ ಬಂದು ಎಲ್ಲಾ ಸಣ್ಣ ಹಕ್ಕಿಗಳನ್ನೂ ಶಿಸ್ತಿನಿಂದ ಗುಂಪು ಸೇರುವಂತೆ ಆಜ್ಞಾಪಿಸಿತು.

ಆಗ ಆ ಸಣ್ಣ ಗೂಬೆಗಳಲ್ಲಿ ಒಂದು ಮತ್ತು ಆ ನಾಲ್ಕು ಮಾರ್ಗ ದರ್ಶಕ ಹಕ್ಕಿಗಳೂ ಬಿರುದು ಪಡೆದಿರುವ ಇತರ ಜಾಣ ಹಕ್ಕಿಗಳೊಡ ಗೂಡಿ ಆ ಭಾರೀ ನಾಯಿಕೊಡೆಯ ಸುತ್ತಲೂ ಬಳಸಿ ಬಂದು ಆಟ ವಾಡಿದವು. ತಾಯಿ ಗೂಬೆಯು ಆ ಪುಟಾಣಿಗಳಿಗೆ ತರಬೇತು ಕೊಡು ವುದರಲ್ಲಿ ನಿರತವಾಗಿತ್ತು. ಆ ಬಳಿಕ ತಾಯಿ ಗೂಬೆಯು ನಮ್ಮಧ್ಯೇಯ ಯಾವುದು ಎಂಬುದು ನಿಮಗೆ ಗೊತ್ತೇ ಎಂದು ಎಲ್ಲರನ್ನು ಪ್ರಶ್ನಿಸಿತು.

ನಮ್ಮಿಂದ ಸಾಧ್ಯವಾದಷ್ಟು ಬಹಳ ಒಳ್ಳೆಯದನ್ನೇ ಮಾಡುವೆವು, ಮನೆಯಲ್ಲಾಗಲೀ, ಹೊರಗೂ ಎಲ್ಲೆಲ್ಲೂ ಕೂಡ ಹಿರಿಯರಿಗೆ ವಿಧೇಯ ರಾಗಿ ನೆರವಾಗುವೆವು ಎಂದು ಅಲ್ಲಿ ನೆರೆದಿದ್ದ ಪಕ್ಷಿಗಳೆಲ್ಲವೂ ಒಮ್ಮೆಲೆ ಹೇಳಿದವು.

ಕಾರಿಯ ಕೆನ್ನೆಗಳು ನಾಚಿಕೆಯಿಂದ ಕೆಂಪು ಬಣ್ಣಕ್ಕೆ ತಿರುಗಿದವು. ತಾನು ಹಿಂದಿನ ದಿನ ತನ್ನ ಮನೆಯಲ್ಲಿ ಸೀದಿಸಿದ ಗಂಜಿ, ತನ್ನ ಜಡೆಯ ರಿಬ್ಬನ್ ವಿಷಯ ಎಲ್ಲವೂ ಅವಳ ನೆನಪಿಗೆ ಬಂತು. ತಾನು ಯಾವಾ ಗಲೂ ಕೊಳಕು ಕೊಳಕಾಗಿದ್ದುದು ಹಾಠಾತ್ತನೆ ಅವಳಿಗೆ ಈಗ ನೆನ ಪಾಯಿತು.

ಎಲ್ಲಾ ಕಿರಿಯ ಹಕ್ಕಿಗಳೂ ಸರಿಯಾದ ಬ್ಲೂ ಫಿನ್‌ಜೆನ್ (ನಾರ್ವೆ ದೇಶದಲ್ಲಿ ಬ್ಲೂ ಬೆಲ್ಲ್ಸ್ ಎಂಬ ಬಿರುದನ್ನು ಬ್ಲೂ ಫಿನ್‌ಜೆಸ್ ಎಂದು ಕರೆಯುತ್ತಾರೆ) ಎಂಬ ಬಿರುದನ್ನು ಪಡೆಯಲು ಅವಶ್ಯಕವಾದ ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದವು. ಅವೆಲ್ಲವೂ ಈಗ ಬಾಕಿ ಗುಂಪುಗಳೊಡನೆ ಕೂಡಿ ಆ ದೊಡ್ಡ ನಾಯಿಕೊಡೆಯ ಸುತ್ತಲೂ ಕುಣಿದಾಡಿದವು. ಅವೆಲ್ಲವೂ ಆ ಕುಂಟು ಹಕ್ಕಿಯ ಹತ್ತಿರ ಆದಷ್ಟು ದಯೆ ತೋರುತ್ತವೆಯೆಂದು ಕಂಡು, ಕಾರಿಯು ಬಹಳ ಸಂತೋಷಪಟ್ಟಳು. ಇತರ ಹಕ್ಕಿಗಳಂತೆ ಪಾಪ ಆ ಹಕ್ಕಿಯಿಂದ ಕುಣಿದು ಕುಪ್ಪಳಿಸಲು ಸಾಧ್ಯವಾಗಲಿಲ್ಲ. ಆ ಹಕ್ಕಿಯು ಪುನಃ ಕೆಳಗೆ ಬಿದ್ದು ಗಾಯವಾಡಿಕೊಳ್ಳದಂತೆ ಅದರ ಗುಂಪಿನ ಪ್ರತಿಯೊಂದು ಹಕ್ಕಿಯೂ ಸಹ ಬಹಳ ಎಚ್ಚರಿಕೆ ವಹಿಸಿ ಅದನ್ನು ಗಮನಿಸಿಕೊಂಡಿತು. ತಾಯಿ ಗೂಬೆಯು ಕಾರಿಯನ್ನು ಸಮೀಪಿಸಿ "ಈ ಹೊತ್ತು ನಿನ್ನ ಹುಟ್ಟಿದ ಹಬ್ಬವಲ್ಲವೇ" ಎಂದು ಪ್ರಶ್ನಿಸಿತು.

ಕಾರಿ "ಹೌದು ನಾನದನ್ನು ಮರೆತೇ ಬಿಟ್ಟಿದ್ದೆ !"

ತಾಯಿ ಗೂಬೆ, "ನಿನ್ನ ಅಮ್ಮನೂ ಅಪ್ಪನೂ ನಿನಗಾಗಿ ಬಹಳ ಚಿಂತಿಸುತ್ತಿರಬಹುದು. ನಾವು ನಿನ್ನನ್ನು ಮೊದಲು ನಿನ್ನ ಮನೆಗೆ ತಲುಪಿಸಬೇಕು" ಎಂದು ತೀರ್ಮಾನಿಸಿತು.



ಕಾರಿಯು ತನ್ನ ಮನೆಯನ್ನು ತಲುಪಿದಾಗ, ಅವಳ ಮನೆಯ ಮುಂದೆ ಅವಳ ಗೆಳತಿಯರೆಲ್ಲರೂ ಬಣ್ಣ ಬಣ್ಣದ ಹೊಸ ಉಡುಪುಗಳನ್ನು ಉಟ್ಟು ಬಣ್ಣ ಬಣ್ಣದ ಪರಮಾಷೆ ಜಡೆಯ "ರಿಬ್ಬನ್"ಗಳನ್ನು ತೊಟ್ಟು ಅವಳಿಗಾಗಿ ಕಾದು ನಿಂತಿರುವುದನ್ನು ಕಂಡಳು. ಅವಳ ತಾಯಿಯೂ ತಂದೆಯೂ ತಂಗಿಯರೂ, ತಮ್ಮಂದಿರೂ ಅವಳು ಕಾಣೆಯಾಗಿದ್ದುದರಿಂದ ಅತ್ತೂ...ಅತ್ತು ಕಣ್ಣು ಕೆಂಪು ಮಾಡಿಕೊಂಡಿದ್ದರು. ಇದೀಗ ಕಾರಿಯು ಓಡಿ ಬಂದು ಅಮ್ಮನನ್ನು ತಬ್ಬಿಕೊಂಡು ಅತ್ತಳು. ಅವಳು ಅಮ್ಮನ ಹತ್ತಿರ ನಾನು ಇನ್ನು ಮೇಲೆ ಎಂದಿಗೂ ಕೊಳಕಾಗಿರಲಾರೆ ಮನೆಯನ್ನು ಗಲೀಜು ಮಾಡೋಲ್ಲ ನನ್ನಿಂದ ಸಾಧ್ಯವಾದಷ್ಟು ಬಹಳ ಒಳ್ಳೆಯವಳಾಗಿರುತ್ತೇನೆ. ನನ್ನನ್ನು ನೀನು ನಂಬು ಅಮ್ಮಾ" ಎಂದು ಗೋಗರೆದಳು.

ಆ ಬಳಿಕ, ಅವಳು ತನ್ನ ತಮ್ಮಂದಿರೂ, ತಂಗಿಯರು, ತಂದೆ ಮತ್ತು ಗೆಳತಿಯರು ಎಲ್ಲರನ್ನೂ ಒಬ್ಬೊಬ್ಬರನ್ನಾಗಿ ತಬ್ಬಿ ಮುದ್ದಿಟ್ಟಳು. ಅವಳು ಹೇಳಿದಾಗ ಅವಳ ಮುಖಚರ್ಯೆಯು ಸೂರ್ಯನಂತೆ ಪ್ರಕಾಶಮಯವಾಗಿ ಬೆಳಗಿತನ್ನಿ.

ಅವಳ ನಿರೂಪಣೆಯನ್ನು ಕೇಳಿದ ಅವಳ ತಾಯಿಯು ನಾವೆಲ್ಲರೂ ಕೂಡ ಆ ಸಣ್ಣ ಪುಟ್ಟ ಮೈನಾ ಹಕ್ಕಿಗಳಾದರೆ ಎಷ್ಟು ತಮಾಷೆಯಾಗಿರಬಹುದಲ್ಲವೆ! ಆ ವನದಲ್ಲಿ ನಾವು ಕೂಡ ಆ ನಾಯಿ ಕೊಡೆಯ ಸುತ್ತಲೂ ಬಳಸಿ ಬಂದು ಕುಣಿದು ಕುಪ್ಪಳಿಸಿದರೆ ಎಷ್ಟು ಚೆನ್ನ! ಎಂದೆ

ನ್ನಲು, ಅಲ್ಲಿ ನೆರೆದಿದ್ದ ಮಕ್ಕಳೆಲ್ಲರೂ ಹೌದು ಬನ್ನಿರೆಲ್ಲ ಕುಣಿಯೋಣ ಜಗಿಯೋಣ ಆಡೋಣ ಬನ್ನಿರೆಲ್ಲ, ಎಂದು ಹಾಡುತ್ತ ಕೊಲಾಹಲವೆಬ್ಬಿಸಿದರು. ಈ ರೀತಿ ಕಾರಿಯು ಹುಟ್ಟಿದ ಹಬ್ಬದಂದು ಮೊಟ್ಟ ಮೊದಲನೆಯ ನಾರ್ವೇ ದೇಶದ "ಗ್ರೂಪ್ ಆಫ್ ಫಿನ್‌ಜೆಸ್ ರೂಪಗೊಂಡಿತು" (ನಮ್ಮ ದೇಶದಲ್ಲಿ ಬುಲ್ ಬುಲ್ ಎಂದು ಕರೆಯಲ್ಪಡುವ ಗುಂಪನ್ನು ನಾರ್ವೇ ದೇಶದಲ್ಲಿ ಫಿನ್‌ಜೆಸ್ ಎಂದು ಕರೆಯುತ್ತಾರೆ).



## ಸಿಲೋನು ದೇಶದ ಲಿಟಲ್ ಫ್ರೆಂಡ್ಸ್ ಕಥೆ

ಒಂದಾನೊಂದು ಕಾಲದಲ್ಲಿ ಇಬ್ಬರು ಮಕ್ಕಳಿದ್ದರು. ಅವರ ಹೆಸರು ಲಕ್ಷ್ಮಣ ಮತ್ತು ವಿಮಲ, ಅವರ ಮನೆಯಲ್ಲಿ ಲಕ್ಷ್ಮಣ, ವಿಮಲ ಅವರುಗಳ ತಾಯಿ, ತಂದೆ, ಅಜ್ಜಿ ಇಷ್ಟು ಮಂದಿ ವಾಸವಾಗಿದ್ದರು. ಅವರದು ಒಂದು ಪುಟ್ಟ ಮನೆ ಅದು ಒಂದು ಅಡವಿಯ ಅಂಚಿನಲ್ಲಿತ್ತು. ಅವರ ತಂದೆಯು ಒಬ್ಬ ರೈತ. ಆತನಿಗೆ ಒಂದು 'ಎಕರೆ'ಯಷ್ಟು ಬತ್ತದ ಗದ್ದೆ ಇತ್ತು. ಇದರಲ್ಲಿ ಅವನು ಬೆಳಗಿನಿಂದ ಸೂರ್ಯ ಮುಳುಗುವ ವರೆಗೂ ದುಡಿಯುತ್ತಿದ್ದ. ಅವನ ಹೆಂಡತಿಯು ತನ್ನ ದಿನದ ಮನೆಗೆಲಸಗಳನ್ನು ಮಾಡಿ ಮುಗಿಸಿಕೊಂಡು ಪದೇ ಪದೇ ತಮ್ಮ ಗದ್ದೆಗೆ ಹೋಗಿ ಗಂಡನಿಗೆ ಒತ್ತಾಸೆ ಮಾಡುತ್ತಿದ್ದಳು. ತಮ್ಮ ಕುಟುಂಬದ ವರಮಾನವನ್ನು ಹೆಚ್ಚಿಸಲು ಅವಳು ತನ್ನ ಮನೆಯ ಅಂಗಳದಲ್ಲಿ ಕೈತೋಟವನ್ನು ಬೆಳಿಸಿದಳು. ಅವಳ ಮನೆಯಿಂದ ಐದು ಮೈಲುಗಳಾಚೆ ಒಂದು ಹಳ್ಳಿ ಇತ್ತು. ಅಲ್ಲಿ ಪ್ರತಿ ಭಾನುವಾರವೂ ಸಂತೆ ಜರುಗುತ್ತಿತ್ತು. ಅವಳು ತನ್ನ ತೋಟದಲ್ಲಿ ಬೆಳೆಯುತ್ತಿದ್ದ ತರಕಾರೀ ವಗೈರೆಗಳನ್ನು ಆ ಸಂತೆಗೆ ಕೊಂಡೊಯ್ದು ಮಾರಿ ಬಂದ ಹಣವನ್ನು ಮನೆಯ ಖರ್ಚಿಗೆ ಅನುಬಂಧವಾಗಿ ಕೂಡಿಸುತ್ತಿದ್ದಳು. ಅಂತೂ ಆ ದಂಪತಿಗಳಿಗೆ ಅದೆಷ್ಟೇ ದುಡಿದರೂ ಸಹ ಬಾಳ್ವೆಯು ದುರದೃಷ್ಟವಶಾತ್ ಕಷ್ಟಮಯವಾಗಿತ್ತು. ಯಾಕೆಂದರೆ, ಅಂತಹ ಬೆಳೆಗೆ ಸಮೃದ್ಧಿಯಾಗಿ ಮಳೆ ಅವಶ್ಯಕ. ಆದರೆ ಅತೀ ವೃಷ್ಟಿಯಾದರೂ ಅನಾಹುತವೇ ಮಳೆ ಕಡಿಮೆಯಾದರೂ ಕಷ್ಟವೇ. ಹಾಗಾದರೆ ಬೆಳೆಯು ಪೂರ್ತಿ ನಾಶವಾಗುತ್ತಿತ್ತು.



ಆ ದಂಪತಿಗಳ ತೊಂದರೆಗಳಿಗೆ ಲಕ್ಷ್ಮಣನೂ ವಿಮಲೆಯೂ ಸಹ ಇನ್ನಷ್ಟು ಚಿಂತೆಯನ್ನು ಒಡ್ಡಿದರು. ಅವರಿಬ್ಬರೂ ಬಹಳ ಸೋಮಾರಿಗಳು, ಮರವೂ ಹೆಚ್ಚು. ಅಷ್ಟು ಮಾತ್ರವಲ್ಲದೆ ಸುಲಭದಲ್ಲಿ ಹೇಳಿದ ಮಾತು ಕೇಳುತ್ತಿರಲಿಲ್ಲ. ಅಂದರೆ ಬಹಳ ಅವಿಧೇಯರಾಗಿದ್ದರೆನ್ನಿ. ಅವರ ತಾಯಿಯು ತನ್ನ ಪತಿಗೆ ಮಧ್ಯಾಹ್ನದ ಊಟವನ್ನು ಆ ಮಕ್ಕಳ ಸಂಗಡ ಗದ್ದೆಗೆ ಕಳುಹಿಸಿಕೊಡುವುದು ಕಷ್ಟತಮವಾಗಿತ್ತು. ಅವಳಿಗಂತೂ ಮನೆಯಲ್ಲಿ ಬಹಳ ಕೆಲಸ ಪಾಪ. ಅಡಿಗೆ ಮಾಡಬೇಕು ಹೊಲಿಯಬೇಕು, ಮನೆಪೂರ್ತಿ ಧೂಳು ಕೊಡವಿ, ಗುಡಿಸಿ, ಸಾರಿಸಿ ಪರಿಶುದ್ಧಗೊಳಿಸಬೇಕು. ಇಷ್ಟಕ್ಕೂ ಅವಳಿಗೆ ತನ್ನ ಮಕ್ಕಳಿಂದ ಎಳ್ಳಷ್ಟೂ ನೆರವು ಸಿಗುತ್ತಿರಲಿಲ್ಲ. ಹಾಗೇನಾದರೂ ಅವರಿಬ್ಬರು ಅವಳ ಸಹಾಯಕ್ಕೆ ಬಂದರೆಂದರೆ ಕೆಲಸವೆಲ್ಲವನ್ನೂ ಕೆಡಿಸಿಬಿಡುತ್ತಿದ್ದರು. ಆಗ, ಅವಳಿಗೆ ಒಂದಕ್ಕೆ ಎರಡರಷ್ಟು ಕೆಲಸ ಹೆಚ್ಚುತ್ತಿತ್ತು ಅಷ್ಟೆ !.

ಒಂದು ದಿನ ಆ ಮಕ್ಕಳ ತಾಯಿಯು ಮನೆಯನ್ನು ಧೂಳು ಕೊಡವಿ ಗುಡಿಸಿ, ಸಾರಿಸಿ, ಬಳಿಕ ಸ್ವಲ್ಪ ಹೊತ್ತು ಹೊರಗೆ ಹೋಗಿ ಬಂದಳು. ಆಗ ಅವಳ ಮನೆಯನ್ನು ನೋಡಿ ಅವಳಿಗೆ ಬೇಜಾರು ಹತ್ತಿತ್ತು. ಲಕ್ಷಣನೂ, ವಿಮಲೆಯೂ ನಡುಮನೆಯಲ್ಲಿ ಮಣ್ಣು ಕಲೆಸಿ ಚಪಾತಿ ತಟ್ಟುತ್ತಾ ಕುಳಿತಿದ್ದರು. ಅವರುಗಳು ಉಟ್ಟಿದ್ದ ಉಡುಪುಗಳೆಲ್ಲವೂ ಕೆಸರುಮಯ, ಬಾಗಿಲಿನಿಂದ ಹಿಡಿದು ಅವರುಗಳು ಕುಳಿತಿರುವ ಜಾಗದ ವರೆಗೂ ಕೆಸರಿನ ಹೆಜ್ಜೆಗಳು ಬೇರೆ ಕಾಣಿಸಿಕೊಂಡವು. ಆ ಮಕ್ಕಳು ಮಣ್ಣನ್ನು ಕಲೆಸಿ ಒಳಗೆ ತರುವಾಗ ಕಾಲುಗಳನ್ನು ತೊಳೆದುಕೊಂಡು ಬರಲಿಲ್ಲ. "ತುಂಟ ಮಕ್ಕಳಿರಾ ನಾನಿನ್ನು ನಡುಮನೆ ಪೂರ್ತಿ ಗುಡಿಸಿ ಸಾರಿಸಬೇಕಷ್ಟೆ, ನನಗೀಗ ಮನೆಯಲ್ಲಿ ಲಿಟಲ್ ಫ್ರುಂಡ್ (ಸಿಲೋನ್ ದೇಶದಲ್ಲಿ ಬುಲ್ ಬುಲ್‌ಗಳಿಗೆ ಲಿಟಲ್ ಫ್ರೆಂಡ್ಸ್ ಎಂದು ಹೆಸರಿದೆ) ಇದ್ದಿದ್ದರೆ ಚೆನ್ನ ನನ್ನಿಂದ ಪುನಃ ಹೇಳಿಸಿಕೊಳ್ಳದೆ ಅವರು ನನಗೆ ಎಲ್ಲಾ ಕೆಲಸಗಳನ್ನೂ ಮಾಡಿಕೊಡುತ್ತಿದ್ದರು ಎಂದು ರೇಗುತ್ತ ನಡುಮನೆಯಿಂದ ಹೊರಟು ಹೋದಳು.



ಆ ಕೂಡಲೇ ವಿಮಲೆಯು ಸಂತೋಷದಿಂದ ನೆಗೆದಳು. "ಇದೊಂದು ಒಳ್ಳೆಯ ಯೋಚನೆ ಲಕ್ಷ್ಮಣ ನಮ್ಮ ಮನೆಯಲ್ಲಿ "ಲಿಟಲ್ ಫ್ರೆಂಡ್ಸ್" ವಾಸವಾಗಿದ್ದರೆ, ಅವರು ಮನೆಯನ್ನು ಗುಡಿಸಿ ಪಾತ್ರೆಗಳನ್ನು ತೊಳೆದು, ಸೌದೆ ತಂದು ಜೋಡಿಸಿ ಅಮ್ಮನಿಗೆ ಎಲ್ಲಾ ಕೆಲಸಗಳನ್ನು ಮಾಡಿಕೊಡುತ್ತಿದ್ದರು. ಆಗ, ಅಪ್ಪನೂ ಅಮ್ಮನೂ ನಮ್ಮನ್ನು ಬೈಯುತ್ತಿರಲಿಲ್ಲ. ನಾವು ನಮ್ಮ ಪಾಡಿಗೆ ದಿನವೆಲ್ಲ ಹಾಯಾಗಿ ಆಟವಾಡುತ್ತಿರಬಹುದು. ಈ ಲಿಟಲ್ ಫ್ರೆಂಡ್ಸ್ ನಮಗೆ ಸಿಗುವುದೆಲ್ಲಿ ? ಗೊತ್ತಿಲ್ಲವಲ್ಲಾ, ಅವರಿರುವ ಸ್ಥಳವು ಬಹುಶಃ ನಮ್ಮ ಅಜ್ಜಿಗೆ ತಿಳಿದಿರಬಹುದು" ಎಂದು ವಿಮಲಾ ನುಡಿದಳು.

ಆ ಕೂಡಲೇ ಆ ಇಬ್ಬರು ಮಕ್ಕಳೂ ಬೀದಿಯ ಜಗುಲಿಯ ಕಡೆಗೆ ಓಡಿದರು. ಅಲ್ಲಿ ಅವರಜ್ಜಿಯು ಇಂಡಿಕೊಲಾ ಎಂಬ ಬಿದಿರಿನಿಂದ ಬುಟ್ಟಿಗಳನ್ನು ಹೆಣೆಯುತ್ತಾ ಕುಳಿತಿದ್ದಳು. ಲಕ್ಷ್ಮಣನೂ, ವಿಮಲೆಯೂ ಅಜ್ಜಿ ಅಜ್ಜಿ ಲಿಟಲ್ ಫ್ರೆಂಡ್ಸ್ ಎಲ್ಲಿ ಸಿಗುತ್ತಾರೆ ? ನಾವು ಅವರಲ್ಲಿಗೆ ಹೋಗಬೇಕು. ಅವರು ನಮ್ಮ ಜೊತೆಯಲ್ಲಿದ್ದರೆ ಒಳ್ಳೆಯದು. ಅಮ್ಮನಿಗೆ ಮನೆಗೆಲಸಗಳಲ್ಲಿ ಒತ್ತಾಸೆಯಾಗಿರುತ್ತಾರೆ" ಎಂದು ಕೇಳಿದರು.

ಅಜ್ಜಿಯು ನಗುತ್ತ ಹೇಳಿದರು "ಹೂಂ, ಅಂತೂ ನೀವು ಮಾಡಬೇಕಾದ ಕೆಲಸಗಳನ್ನು ಇನ್ಯಾರಾದರೂ ಮಾಡಲೆಂದು ಬಯಸುತ್ತೀರಿ ಅಲ್ಲವೇ ?"

ಲಕ್ಷ್ಮಣ, "ಲಿಟಲ್ ಫ್ರೆಂಡ್ಸ್ ಎಂಬುವವರು ಇತರರಿಗೆ ಯಾವಾಗಲೂ ಸಹಾಯ ಮಾಡುತ್ತಾರೆ ಎಂದು ನಮ್ಮಮ್ಮ ಹೇಳಿದರು."

ಅಜ್ಜಿ, "ನೀವು ಅವರನ್ನ ನೋಡಲೇ ಬೇಕೆಂದರೆ ಹೋಗಿ ನೋಡಬಹುದು ಅಡವಿಯ ರಾಣಿ ಸಿಲೆವಳನ್ನು ಹೋಗಿ ಕೇಳಿ, ಆಕೆ ಯಂತೂ ಬಹಳ ಜಾಣೆ, ಅವಳು ನಿಮಗೆ ಈ ಪ್ರಶ್ನೆಗೆ ಉತ್ತರ ಕೊಡ ಬಲ್ಲಳು" ಎಂದು ಬಿಸುಸುಯ್ದರು.

ಲಕ್ಷ್ಮಣನೂ, ವಿಮಲೆಯೂ ತಮ್ಮ ಅಜ್ಜಿಗೆ ವಂದನೆ ಸಹ ಹೇಳದೆ ಸಿಲ್ವನ್ನಾ ರಾಣಿಯು ವಾಸಿಸುತ್ತಿದ್ದ ಅಡವಿಯ ಕಡೆಗೆ ಓಟತೆಗೆದರು ಆ ಅಡವಿಯಲ್ಲಿ ಸುಂದರವಾದೊಂದು ಭವನ, ಅದರಲ್ಲಿ ಆಕೆ ವಾಸ ವಾಗಿದ್ದಳು. ಭವನದ ಬಾಗಿಲು ತೆರೆದಿತ್ತು. ಮರ್ಯಾದೆಗೂ ಸಹ ಒಳಗೆ ಬರಬಹುದೇ ? ಎಂದು ಧ್ವನಿ ಎಬ್ಬಿಸದೆ, ಇಬ್ಬರೂ ನೆಟ್ಟಗೆ ಭವನದೊಳಗೆ ನುಗ್ಗಿ ಭವನವನ್ನೆಲ್ಲವನ್ನು ನೋಡುತ್ತಿದ್ದರು.



ಆಗ ಅವರಿಬ್ಬರು "ಪ್ರೀತಿಯ ರಾಣಿ ನಮಗೆ ನಿಮ್ಮಿಂದ ಒಂದು ಉಪಕಾರವಾಗಬೇಕು," ಎನ್ನಲು "ಸಿಲ್‌ವನ್ನಾ" ಖಂಡಿತ ಆಗಲಿ ಮಕ್ಕಳಿರಾ ನನ್ನಿಂದ ನಿಮಗೆ ಏನಾಗಬೇಕು ? ಎಂದು ಅವರತ್ತ ತಿರುಗಿ ಕೊಂಡು ಉತ್ತರವಿತ್ತಳು.

ವಿಮಲಾ, "ನಮ್ಮ ಮನೆಗೆ ಬಂದು ನಮ್ಮೊಡನೆ ವಾಸಿಸಲು ಲಿಟಲ್ ಫ್ರೆಂಡ್ಸ್‌ರನ್ನು ತೋರಿಸಿ ಕೊಡುವಿರಾ ?"

ಸಿಲ್‌ವನ್ನಾ, "ಅಂತಹ ಇಬ್ಬರು ನನಗೆ ಗೊತ್ತು ಅವರಿಬ್ಬರೂ ಈಗಾಗಲೇ ನಿಮ್ಮ ಮನೆಯಲ್ಲಿ ಇದ್ದಾರೆ !."

ವಿಮಲಾ, "ಅದು ಹೇಗೆ ಸಾಧ್ಯ ? ಮನೆಗೆಲಸದಲ್ಲಿ ನಮ್ಮಮ್ಮ ನಿಗೆ ಸಹಾಯ ನೀಡಲು ನಮ್ಮ ಮನೆಯಲ್ಲಿ ಯಾರೂ ಇಲ್ಲವಲ್ಲ".



ಸಿಲ್‌ವನ್ನಾ "ನಾನೀಗ ಹೇಳುತ್ತಿರುವ ಈ ಇಬ್ಬರು ಲಿಟಲ್ ಫ್ರೆಂಡ್ಸ್ ನಿಮ್ಮ ಮನೆಯಲ್ಲೀ ಈಗ ಇದ್ದಾರೆ. ಅವರಿಬ್ಬರೂ ದುರದೃಷ್ಟವಶಾತ್ ಬಹಳ ವೈಗಳ್ಳರಾಗಿದ್ದಾರೆ."

"ಆ ಇಬ್ಬರು ಮಕ್ಕಳು," ಅದು ಸರಿ ಅವರಿಬ್ಬರನ್ನೂ ನಮ್ಮ ಮನೆಯಲ್ಲಿ ಈ ವರೆಗೆ ನಾವು ಕಣ್ಣಾರೆ ನೋಡಿಲ್ಲ, ನಾವು ಅವರನ್ನು ನೋಡಲು ಸಾಧ್ಯವೇ ? ಸಿಲ್‌ವನ್ನಾ ರಾಣಿ, ಓಹೋ ನೋಡಬಹುದು. ನಾನು ಹೇಳುವಂತೆ ಕೇಳಿ ಜೋಕೆ ಕಿವಿಗೊಟ್ಟು ಕೇಳಿ ಈ ಅಡವಿಯಲ್ಲಿ ಅಲ್ಲಲ್ಲಿ ನಾಯಿಕೊಡೆಗಳು ಬೆಳೆದಿವೆಯಂತೆ ಅವುಗಳ ಸುತ್ತಮುತ್ತ ಆಗಾಗ್ಗ ದೇವತೆಗಳು ಸಂಚರಿಸುತ್ತಿರುತ್ತಾರಂತೆ. ಈ ಅಡವಿಯಲ್ಲೊಂದು ಕಲ್ಪವೃಕ್ಷವಿದೆ. ಅದರ ಹತ್ತಿರ ಬಹಳ ದೊಡ್ಡದೊಂದು ನಾಯಿಕೊಡೆ ಹುಟ್ಟಿಕೊಂಡಿದೆ. ಅದನ್ನು ನೀವು ಕಂಡು ಹಿಡಿಯಿರಿ. ಅದನ್ನು ಮುಟ್ಟಿ ಈ ಕೆಳಗಿನ ಪದ್ಯವನ್ನು ಹೇಳಿ.

"ಎಲೈ ಲಿಟಲ್ ಫ್ರೆಂಡ್ ನನಗೆ ಒಬ್ಬ ಚೋಟುದ್ದ ಮನುಷ್ಯ (ಯುಲಫ್)ನನ್ನು ತೋರು — — — ನಾನು ನೀರೊಳಗೆ ಬಗ್ಗಿ ನೋಡುವೆನು ಅಲ್ಲಿ ನೋಡಿದೆ — — — ಈ ಹಾಡನ್ನು ಹೇಳಿದ ಬಳಿಕ ಉತ್ತರಮುಖವಾಗಿ ತಿರುಗಿರಿ. ಇಪ್ಪತ್ತು ಹೆಜ್ಜೆಗಳು ನಡೆಯಿರಿ, ಆಗ ಅಲ್ಲಿ ಒಂದು ಕೊಳ ಒಬ್ಬೊಬ್ಬರಿಗೂ ಒಬ್ಬೊಬ್ಬ ಲಿಟಲ್ ಫ್ರೆಂಡ್‌ನನ್ನು ಕಾಣುವಿರಿ ಅದೇ ಸಮಯ ನಿಮ್ಮ ಪದ್ಯವನ್ನು ಹೇಳಿ ಮುಗಿಸಲು ಒಂದು ಪದವನ್ನು ಯೋಚಿಸಿ ಜೋಡಿಸಿ.



ಲಕ್ಷ್ಮಣನೂ, ವಿಮಲೆಯೂ ತಮ್ಮಿಂದ ಸಾಧ್ಯವಾದಷ್ಟು ವೇಗವಾಗಿ ಆ ಕಲ್ಪವೃಕ್ಷವನ್ನು ಹುಡುಕಿಕೊಂಡು ಓಡಿದರು. ಅಲ್ಲಿ ವಿಮಲೆಯು ಸಿಲ್‌ವನ್ನಾ ರಾಣಿಯು ಹೇಳಿದಂತೆಯೆ ಅಕ್ಷರಶಃ ಅನುಸರಿಸಿದಳು. ಬಳಿಕ ಕೊಳದ ನೀರನ್ನು ಬಗ್ಗಿ ನೋಡಿದಳು. ನೀರೊಳಗೆ ಅವಳು ತನ್ನ ಪ್ರತಿಬಿಂಬವನ್ನೇ ಕಂಡಳು. ತಕ್ಷಣ ವಿಮಲೆ, ಇದೆಂತಹ ತಮಾಷೆ! ನನ್ನ ಪ್ರತಿಬಿಂಬವನಲ್ಲವೆ ಇಲ್ಲಿ ನೋಡುತ್ತಿದ್ದೇನೆ. ಸಿಲ್‌ವನ್ನಾ ರಾಣಿಯು ಹತ್ತಿರ ಹಿಂದಿರುಗಿ ಹೋಗಿ ಯಾಕೆ ಹೀಗಾಯಿತು ? ಎಂದು ಕೇಳೋಣ ಬಾ ಎಂದಳು.

ಅವರಿಬ್ಬರೂ ಮತ್ತೆ ತನ್ನ ಬಳಿಗೆ ಓಡಿ ಬಂದುದನ್ನು ಕಂಡ ಸಿಲ್‌ವನ್ನಾ ಕೊಳದಲ್ಲಿ ಏನನ್ನು ನೋಡಿದಿರಿ ? ಎಂದು ಕೇಳಿದಳು.

ವಿಮಲಾ, "ರಾಣಿ ನೀವು ತಪ್ಪಾಗಿ ಹೇಳಿದಿರೇನು ? ಬಹಳ ಎಚ್ಚರಿಕೆ ವಹಿಸಿ ನೀವು ಹೇಳಿದಂತೆಯೇ ನಾನು ನಡೆದುಕೊಂಡೆ, ನಾನು ಆ ಕೊಳದಲ್ಲಿ ಏನನ್ನು ನೋಡಿದೆ ಗೊತ್ತೆ, ನನ್ನನ್ನೇ ! ಎಂದು ಸಿಟ್ಟಿನಿಂದ ಉತ್ತರವಿತ್ತಳು.

ಸಿಲ್‌ವನ್ನಾ ರಾಣಿಯು ಎಂದಿಗಿಂತಲೂ ಪ್ರಸನ್ನಳಾಗಿ ನಕ್ಕು ಅದಕ್ಕಾಗಿಯೇ ನಾನು ಆ ಪದ್ಯವನ್ನು ಕೊನೆಯ ವರೆಗೂ ಹೇಳಿ ಮುಗಿಸಲಿಲ್ಲ. ನೀವು ನಿಜವಾಗಿ ಈಗ ಪ್ರಯತ್ನಪಡಿರಿ. ನಿಮ್ಮ ತಾಯಿ ತಂದೆಯವರು ಬಯಸುವಂತಹ ಲಿಟಲ್ ಫ್ರೆಂಡ್ಸ್ ಆಗಿ ನೀವೆ ಆಗುವಿರಿ. "ಆ ಪದ್ಯದ ಕೊನೆಯಲ್ಲಿ ನಿಮ್ಮ ಹೆಸರನ್ನೇ ಜೋಡಿಸಬಹುದು. ನೀವಿಬ್ಬರೂ ಈಗ "ಲಿಟಲ್ ಫ್ರೆಂಡ್ಸ್" ಆದರೆ ನಿಮ್ಮ ತಾಯಿಗೆ ಅಡಿಗೆಯ ಕೆಲಸದಲ್ಲೂ, ಮನೆಯನ್ನು ಪರಿಶುದ್ಧಗೊಳಿಸಿ ಚೊಕ್ಕಟ ಮಾಡುವದರಲ್ಲಿ ನೆರವಾಗುವಿರಿ. ಇನ್ನೂ ಹಲವು ಬಗೆ ನಿಮ್ಮ ನಿಮ್ಮ ಸಾಮಾನುಗಳನ್ನು ನೈನವಾಗಿ ಜೋಡಿಸಿಟ್ಟುಕೊಂಡು ಜಾಣರಾಗಿರಬಲ್ಲಿರಿ. ಇನ್ನೂ ಹಲವು ಬಗೆಗಳಲ್ಲಿ ಎಲ್ಲರಿಗೂ ಒತ್ತಾಸೆ ಮಾಡಬಲ್ಲಿರಿ. ಪ್ರಯತ್ನ ಮಾಡಿ ಮಕ್ಕಳಿರಾ.

ಅಲ್ಲೆ ಸ್ವಲ್ಪ ಹೊತ್ತು ಪರಿಪೂರ್ಣ ಮೌನ ಆವರಿಸಿತು. ನಂತರ ಮಕ್ಕಳಿಬ್ಬರೂ ಸಿಲ್‌ವನ್ನಾ ರಾಣಿಗೆ ವಂದನೆ ಸಲ್ಲಿಸಿ ಚಿಂತಿಸುತ್ತ ಸುಮ್ಮನೆ ಮನೆಯ ಕಡೆ ನಡೆದರು. ಇಬ್ಬರು ದಾರಿ ಉದ್ದಕ್ಕೂ ಮಾತನಾಡುತ್ತ ಹೋದರು.

ಅಮ್ಮನೂ ಅಪ್ಪನೂ ಆಶ್ಚರ್ಯಪಡುವಂತೆ ನಾಳೆ ಬೆಳಿಗ್ಗೆ ಬೆಳಕು ಹರಿಯುವಾಗಲೇ ನಾವಿಬ್ಬರು ಹಾಸಿಗೆಯಿಂದ ಎದ್ದುಬಿಡೋಣ, ಅವರಿಬ್ಬರೂ ಎಚ್ಚೆತ್ತೇಳುವುದರೊಳಗಾಗಿ ನಮ್ಮಿಂದ ಸಾಧ್ಯವಾದಷ್ಟು ಮನೆಗೆಲಸವನ್ನು ಮಾಡೋಣ ಎಂದೆಲ್ಲಾ ವಿಮಲಾ ಹೇಳಿದಳು. ಲಕ್ಷ್ಮಣ ಅವಳ ಮಾತಿಗೆ ತಲೆದೂಗಿದನು.



ಮರುದಿನ ಅತೀ ಮುಂಜಾನೆಯೇ ಆ ಪುಟ್ಟ ಮಕ್ಕಳಿಬ್ಬರೂ ಹಾಸಿಗೆಯಿಂದ ಎದ್ದು ಮುಖ ತೊಳೆದು ಮನೆ ಕೆಲಸದಲ್ಲಿ ನಿರತರಾದರು. ಒಲೆ ಹಚ್ಚಿ ನೀರು ಕಾಯಿಸಿದರು. ಇಬ್ಬರು ಸೇರಿ ಮನೆ ಗುಡಿಸಿದರು. ಗಿಡಗಳಿಗೆ ನೀರು ಹುಯ್ದರು. ಬಳಿಕ ಸಮೀಪದಲ್ಲಿದ್ದ ಅಡವಿಗೆ ಹೋಗಿ ಸೌದೆಯ ಚೆಕ್ಕೆಗಳನ್ನು ಆರಿಸಿ ತಂದು ಅಂಗಳದಲ್ಲಿ ಅಚ್ಚುಕಟ್ಟಾಗಿ ಜೋಡಿಸಿಟ್ಟರು. ತಮ್ಮಿಂದ ಸಾಧ್ಯವಾದಷ್ಟು ಕಾರ್ಯಗಳನ್ನು ಮಾಡಿ ಮುಗಿಸಿ ಆಟವಾಡಲು ಹೊರಗೆ ಹೊರಟುಹೋದರು.

ಅವರ ತಾಯಿ ತಂದೆಯರು ಎಚ್ಚೆತ್ತಾಗ ಅವರು ತಮ್ಮ ಮನೆಯಲ್ಲಾಗಿರುವ ಒಳ್ಳೆಯ ಬದಲಾವಣೆಗಳನ್ನು ಕಂಡು ಅತ್ಯಾನಂದಗೊಂಡು, ಎಲ್ಲರನ್ನೂ ಕರೆದು ತೋರಿಸಿದರು. ವಿಮಲೆಯೂ, ಲಕ್ಷ್ಮಣನೂ ಈ ರಹಸ್ಯವನ್ನು ಇನ್ನೂ ಮುಚ್ಚಿಡಲು ಸಾಧ್ಯವಿಲ್ಲದೆ, ಮನೆಯೊಳಗೆ ಓಡಿ ಬಂದು, "ಅಮ್ಮಾ ಅಮ್ಮಾ" ನಾವೇ ಈ ಎಲ್ಲಾ ಕೆಲಸಗಳನ್ನೂ ಮಾಡಿದೆವು, ಈ ಹೊತ್ತಿನಿಂದ ನಾವಿಬ್ಬರು ಲಿಟಲ್ ಫ್ರೆಂಡ್ಸ್, ನಾವು ಈ ನಮ್ಮ ಮನೆಯಲ್ಲಿ ವಾಸಮಾಡುವ ಲಿಟಲ್ ಫ್ರೆಂಡ್ಸ್ ನಾವು ಎಂದು ಸಂತೋಷವಾಗಿ ಹಾಡುತ್ತಾ ಕುಣಿದರು.



## ಫ್ರಾನ್ಸ್ ದೇಶದ ಜಾನಿ ಕಥೆ

ಒಂದಾನೊಂದು ಕಾಲದಲ್ಲಿ ಒಂದು ಭವ್ಯವಾದ ಅರಮನೆ ಇತ್ತು. ಆ ಅರಮನೆಯ ಸುತ್ತಲೂ ಸೊಗಸಾದ ತೋಟವಿತ್ತು. ಆ ತೋಟದ ಸಮೀಪದಲ್ಲೇ ಒಬ್ಬ ಸೌದೇ ಮಾರುವವನು ವಾಸಿಸುತ್ತಿದ್ದನು. ಅವನ ಹೆಸರು ಪ್ರಿಯರಿ ಎಂದು, ಅವನಿಗೆ ಏಳು ಮಂದಿ ಹೆಣ್ಣು ಮಕ್ಕಳು.

ಒಂದು ದಿನ ಬೆಳಿಗ್ಗೆ ಏಳು ಮಂದಿ ಹೆಣ್ಣುಮಕ್ಕಳೂ ಅರಮನೆಯ ತೋಟದಲ್ಲಿ ಆಟವಾಡುತ್ತಿದ್ದರು. ಆಗ, ಅಕಸ್ಮಾತು ಅವರಿಗೊಂದು ಪುಟಾಣಿ ಪೆಟ್ಟಿಗೆ ಸಿಕ್ಕಿತು. ಅದನ್ನು ಅವರು ಎಷ್ಟು ಪ್ರಯತ್ನ ಪಟ್ಟರೂ ತೆರೆಯಲು ಸಾಧ್ಯವಾಗಲಿಲ್ಲ. ಅವರಲ್ಲಿ ಒಬ್ಬ ಹುಡುಗಿಯು ಇದರೊಳಗೆ ಬೊಕ್ಕಸವಿದೆಯೆಂದು ಕಂಡುಕೊಂಡೆಯಾ ಎಂದು ಮತ್ತೊಬ್ಬ ಹುಡುಗಿಯನ್ನು ಕೇಳಿದಳು. ಇನ್ನೊಬ್ಬಳು ಇಲ್ಲ ಇದು ಅಷ್ಟೇನೂ ಭಾರವಾಗಿಲ್ಲ. ಮತ್ತೊಬ್ಬಳು, ಇದನ್ನು ರಾಜನ ಅಕ್ಕಸಾಲಿಗನ ಹತ್ತಿರ ಕೊಂಡೊಯ್ಯೋಣ ಅವನು ನಮಗಾಗಿ ಇದನ್ನು ತೆರೆದು ಕೊಡುವನು.

ಇನ್ನೊಬ್ಬಳು 'ಇಲ್ಲ' ಅವನು ಇದನ್ನು ಕಂಡರೆ ಸಾವಿರದೆಂಟು ಪ್ರಶ್ನೆಗಳನ್ನು ಹಾಕುವನು. ಬಳಿಕ ಅವರೆಲ್ಲರಿಗೂ ಕಿರಿಯವಳಾದ ನಿಕೋಲ ಮುಂಚೆ ಅಮ್ಮನಿಗೆ ಇದನ್ನು ತೋರಿಸೋಣ ಅವಳು ನಮಗೆ ನೆರವಾಗುವಳು.

ಆಗ, ಅವರೆಲ್ಲರಿಗೂ ಅದೊಂದು ಒಳ್ಳೆಯ ಯೋಚನೆಯೆಂದು ತೋರಿತು. ಎಲ್ಲರಿಗೂ ಪೆಟ್ಟಿಗೆಯ ಸಹಿತ ಅವರ ಮನೆಯ ಕಡೆಗೆ

ನಡೆದರು. ಆದರೆ ಅವರನ್ನು ಅದಾರೋ ನೋಡುತ್ತಿರುವರೆಂಬ ಅರಿವು ಅವರಿಗಿಲ್ಲವಾಯಿತು.



ಒಂದು ಪುಟಾಣಿ ಜ್ಯಾನೀ (ದೇವತೆ) ಮನುಷ್ಯನು ಅವರೆಲ್ಲರ ಮಾತುಗಳನ್ನೂ ಕೇಳುತ್ತ ಅಲ್ಲೇ ಹುಲ್ಲುಗಾವಲಿನಲ್ಲಿ ಅವರಿಗೆ ಮರೆಯಾಗಿ ಮಲಗಿದ್ದನೆನ್ನಿ. ಈ ಮಾತುಗಳನ್ನು ಕಿವಿಗೊಂಡವನೇ ಅಲ್ಲಿಂದ ಮಾಯವಾಗಿಬಿಟ್ಟನು. ತನ್ನ ವಾಸ ಸ್ಥಳಕ್ಕೆ ನಡೆಯುತ್ತ ಅವನು ಈ ರೀತಿ ತನ್ನಷ್ಟಕ್ಕೆ ಹಾಡುತ್ತ ಹೋಗುತ್ತಿದ್ದನು. "ಅಹಾಹಾ" ಆ ಪೆಟ್ಟಿಗೆಯಲ್ಲಿ ಅವರೆಲ್ಲರೂ ಏನನ್ನು ಕಂಡು ತೆಗೆದರು ಅದೊಂದು ರಹಸ್ಯವಲ್ಲವೆ ನನಗೊಬ್ಬನಿಗೆ ಆ ರಹಸ್ಯ ಗೊತ್ತುಂಟು ಟ್ರಾ–ಲಾ–ಲಾ ನಾನು ಮೊಟ್ಟ ಮೊದಲು ಆ ರಹಸ್ಯವನ್ನು ಅರಿತಾಗ ಅದೊಂದು ತಮಾಷೆಯೇ ಆಗಿತ್ತು ಈ ಹುಡುಗಿಯರೆಲ್ಲ ಬಹಳ ದಡ್ಡ ಜೀವಿಗಳು ಈ ಪುಟ್ಟ ಜ್ಯಾನೀ "ಲೂಸ್" ಹೇಳುವುದನ್ನು ಕಿವಿಗೊಟ್ಟು ಕೇಳಿದ್ದರೆ ಆ ಪೆಟ್ಟಿಗೆಯೊಳಗಿನ ರಹಸ್ಯವನ್ನು ತಿಳಿದುಕೊಳ್ಳಬಹುದಾಗಿತ್ತು ಎಂದು ತನ್ನಷ್ಟಕ್ಕೆ ಹಾಡಿಕೊಳ್ಳುತ್ತಿದ್ದನು.

ಆ ಹೊತ್ತು ಬೆಳಿಗ್ಗೆಯೇ ಅವರ ತೋಟದಲ್ಲಿ ಮಂಜಿನ ಹನಿಗಳಿಂದ ಮುಚ್ಚಲ್ಪಟ್ಟು ಥಳಥಳನೇ ಜ್ವಲಿಸುತ್ತ ಹುಲ್ಲಿನ ಮೇಲೆ ಬಿದ್ದಿದ್ದ ಪುಟ್ಟದೊಂದು ಬೀಗದ ಕೈಯು ಆ ಹೆಣ್ಣುಮಕ್ಕಳ ತಾಯಿಯ ಕಣ್ಣಿಗೆ

ಕಾಣಿಸಿಕೊಂಡಿತು. ಅವಳು ಅದನ್ನು ತಂದು, ತನ್ನ ಮಕ್ಕಳಿಗೆ ಕೊಟ್ಟಳು. ಎದೆ ಡಬಡಬನೆ ಹೊಡೆದುಕೊಳ್ಳುತ್ತಿರಲಾಗಿ ಅವರೆಲ್ಲರೂ ಕೂಡಿ ಆ ಪೆಟ್ಟಿಗೆಯನ್ನು ಆ ಬೀಗದ ಕೈಯಿಂದ ತೆರೆಯಲು ಪ್ರಯತ್ನ ಪಟ್ಟರು. ಮುಚ್ಚಳವು ತೆರೆಯಲ್ಪಟ್ಟಿತು.



ಆ ಮಕ್ಕಳು ಆ ಪೆಟ್ಟಿಗೆಯಲ್ಲಿ ಮೂರು ವಸ್ತುಗಳನ್ನು ಕಂಡರು ಅದನ್ನು ತೆಗೆದಾಗ ಒಂದು 'ತಿಂಬಲ್' ಎಂಬ ಬೆರಳಿಗೆ ತೊಡುವ ಕವಚ. ಹೊಲಿಯುವಾಗ ಬೆರಳಲ್ಲಿ ಸೂಜಿ ಚುಚ್ಚದಿರಲು ತೋರುಬೆರಳಿಗೆ ಈ ಕವಚವನ್ನು ಕಲವರು ತೊಡುವ ಪದ್ಧತಿ.



ಇನ್ನೊಂದು ಚಿನ್ನದ ಉಂಗುರ, ಮತ್ತೊಂದು ದಂತದ ಪುಟಾಣಿ ಕೈ, ಅದು ಆ 'ತಿಂಬಲ್'ನಷ್ಟು ಗಾತ್ರದಷ್ಟೇ ಇತ್ತು. ಆ ಮೂರ ವಸ್ತುಗಳನ್ನು ಕಂಡು ಮಕ್ಕಳಿಗೆ ನಿರಾಶೆ ಮಾಡಿತು. ಇದನ್ನು ತೆಗೆದು ಕೊಂಡು ನಾವೇನು ಮಾಡುವುದು ಎಂದು ಒಬ್ಬರಿಗೊಬ್ಬರು ಪ್ರಶ್ನಿಸಿ ಕೊಂಡರು.

ಸೆಸಿಲಿಯು ನಾನು ಈ ಉಂಗುರವನ್ನು ತೆಗೆದುಕೊಳ್ಳುತ್ತೇನೆ ಎಂದಳು. ನನಗೆ ಒಡವೆಗಳನ್ನು ತೊಟ್ಟುಕೊಳ್ಳುವ ವಯಸ್ಸಾಗಿದೆ ಯಲ್ಲವೇ ಎಂದು ಪುನಃ ತನ್ನ ಮಾತನ್ನು ಸಮರ್ಥಿಸಿಕೊಂಡಳು.

ಮತ್ತೊಬ್ಬಳು ಹಾಗಾದರೆ ನಾನು ನನ್ನ ಸಾಮಾನುಗಳನ್ನು ಇಟ್ಟುಕೊಳ್ಳಲು ಈ ಪೆಟ್ಟಿಗೆಯನ್ನು ತೆಗೆದುಕೊಳ್ಳುತ್ತೇನೆ.

'ಜೆಂಟಲ್' ಎಂಬ ಹೆಸರಿನ ಹುಡುಗಿಯು, ನಾನು ಚಿತ್ರದ ಹೊರಗೆ ಹೊಲಿಯಲು ನನಗೆ ಈ 'ತಿಂಬಲ್' ಕೊಡಿ ಎಂದು ಕೇಳಿದಳು.

ಅವಳಂತೂ ಅವರ ಕುಟುಂಬದಲ್ಲಿ ಗಲೀಜು ಹುಡುಗಿ. ಆದ್ದರಿಂದ ಅವಳೆಷ್ಟು ಅಂಗಲಾಚಿ ಕೇಳಿದರೂ ಕೂಡ ಅವರಮ್ಮ ತನ್ನ 'ತಿಂಬಲನ್ನು' ಅವಳಿಗೆ (ಜೆಂಟಲ್‌ಗೆ) ಕೊಡುತ್ತಿರಲಿಲ್ಲ.

'ಯಾರಿಗೆ ಈ ದಂತದ ಕೈ ಬೇಕು ಎಂದು ಸೆಸಿಲಿ ಕೇಳಿದಳು.' ಯಾರಿಗೂ ಬೇಡವಾದರೆ, ನಾನು ಅದನ್ನು ತೆಗೆದುಕೊಳ್ಳುತ್ತೇನೆ ಎಂದು ಜೆಂಟಲ್ ಉತ್ತರವಿತ್ತಳು. ಅಂತೂ ಓಯುರೀಯ ಮನೆಯಲ್ಲಿ ಬಾಳ್ವೆ ಸುಖಮಯವಾಗಿತ್ತು. ಜೆಂಟಲ್ ಆ ಬೆರಳಿನ ಕವಚವನ್ನು ಧರಿಸಿ ಕೊಂಡು ಹೊಲಿಯುತ್ತಿದ್ದುದರಿಂದ ಅವಳ ಚಿತ್ರದ ಹೊಲಿಗೆಯು ಬಹಳ ಸೊಗಸಾಗಿ ರೂಪುಗೊಳ್ಳುತ್ತಿತ್ತು. ಅದನ್ನು ಕಂಡವರೆಲ್ಲರೂ ಬೆರಗಾಗುತ್ತಿದ್ದರು.

ಬೆರಳಿನ ಕವಚವನ್ನು ತೊಟ್ಟುಕೊಂಡು ಹೊಲಿಯುವುದರಿಂದ ಹೊಲಿಯುವುದು ಬಹಳ ಸುಲಭವಾಗಿ ತೋರುತ್ತೆ ಎಂದು ಅವಳು ಅನ್ನುತ್ತಿದ್ದಳು.

ಸೆಸಿಲಿಯು ಆ ಚಿನ್ನದ ಉಂಗುರವನ್ನು ಧರಿಸಲು ತೊಡಗಿದಳು. ಆದರೆ ಅವಳಿಗೆ ಬೇಗನೆ ತೃಪ್ತಿಯಾಗುತ್ತಿರಲಿಲ್ಲ. ಅವಳಿಂದ ಈಗ ಸೋಮಾರಿಯಾಗಿ ಸುಮ್ಮನೆ ಕುಳಿತಿರಲು ಸಾಧ್ಯವಾಗಲಿಲ್ಲ. ಯಾವ ಕೆಲಸವನ್ನು ತೊಡಗಿದ್ದರೂ ಅವಳಿಂದ ಅದನ್ನು ಅರ್ಧದಲ್ಲಿ ನಿಲ್ಲಿಸಿ ಬಿಡಲು ಸಾಧ್ಯವಾಗುತ್ತಿರಲಿಲ್ಲ. ಹಾಗೇನಾದರೂ ತೊಡಗಿದ ಕಾರ್ಯ ವನ್ನು ಅರ್ಧದಲ್ಲಿ ನಿಲ್ಲಿಸಿದಳೆಂದರೆ ಆ ಉಂಗುರವು ಅವಳ ಬೆರಳನ್ನು

ಚೆನ್ನಾಗಿ ಹಿಸುಕಿ ಬಿಡುತ್ತಿತ್ತು. ಆಗ ಸೆಸಿಲ್‌ಗೆ ಆ ನೋವನ್ನು ಅನುಭವಿಸುವುದಕ್ಕಿಂತ ತಾನು ಆ ಕೆಲಸವನ್ನು ಮಾಡಿ ಮುಗಿಸುವುದೇ ಲೇಸೆಂದು ತೋರುತ್ತಿತ್ತು. ಆದುದರಿಂದ ಸೆಸಿಲಿಯು ಮನೆ ಕೆಲಸ ಮಾಡುವುದರಲ್ಲಿ ಬಹಳ ಜಾಣೆಯೆಂದೆಣಿಸಿಕೊಂಡಳು ಅವಳಿಗೆ ಆ ಮೇಲೆ ಆ ಉಂಗುರವನ್ನು ಕಳಚಿ ಇಡಬೇಕೆಂದು ತೋರಲೇ ಇಲ್ಲ. ಅದರ ಬದಲು ಅವಳು ಅದನ್ನು ಬಹಳ ಹೆಮ್ಮೆಯಿಂದ ತೊಟ್ಟಿದ್ದಳು.

ಆದರೆ ಆ ಪುಟಾಣಿ ದಂತದ ಕೈಯಿಂದ ಏನುಪಯೋಗವೆಂದು ಅವರಾರಿಗೂ ತಿಳಿಯದಾಯಿತು.

ಒಂದು ಸಂಜೆ. ನಿಕೊಲೆಯು ಜೇಂಟಲಿನ ಬಣ್ಣ ಬಣ್ಣದ ದಾರಗಳನ್ನು ತೆಗೆದು ಬೆಕ್ಕಿನ ಮರಿಯು ಆಡುವಂತೆ ಆಟವಾಡುತ್ತಿದ್ದಳು. ಅತ್ತ ಜೇಂಟಲ್ ಬಂದಾಗ ಇದನ್ನು ನೋಡಿ ಅವಳಿಗೆ ದುಃಖ ಉಕ್ಕಿ ಬಂತು, ಆಗ ಅವಳು ನಿಕೋಲೆಯನ್ನು ನೋಡಿ ಎಂತಹ ಕೆಲಸ ಮಾಡಿಬಿಟ್ಟೆ ಈ ಗೋಜನ್ನು ಬಿಡಿಸಬೇಕಾದರೆ ನನಗೆ ಮೂರು ದಿನಗಳು ಹಿಡಿಯುತ್ತೆ ಎಂದು ರೇಗುತ್ತ ಗೋಜುದಾರಗಳನ್ನೂ 'ತಿಂಬಿಲನ್ನೂ' ದಂತದ ಕೈಯನ್ನೂ ತನ್ನ ಬುಟ್ಟಿಯೊಳಗಿಟ್ಟು ಮುಚ್ಚಿಟ್ಟು ರಾತ್ರಿ ಬಹಳ ಹೊತ್ತಾಯಿತೆಂದು ಮಲಗಲು ಹೋದಳು.

ಆದರೆ ಮರುದಿನ ಜೇಂಟಲ್ ತನ್ನ ಹೊಲಿಗೆಯ ಬುಟ್ಟಿಯಿಂದ ಗೋಜುದಾರಗಳನ್ನು ಬಿಡಿಸಿ ಉಂಡೆಯಾಗಿ ಸುತ್ತೋಣವೆಂದು ಬುಟ್ಟಿಯ ಮುಚ್ಚಳವನ್ನು ತೆರೆದಳು. ಅಲ್ಲಿ ಅವಳಿಗೊಂದು ಆಶ್ಚರ್ಯ ಕಾದಿತ್ತು. ಗೋಜಾಗಿದ್ದ ಬಣ್ಣ ಬಣ್ಣದ ದಾರಗಳೆಲ್ಲವೂ ಬಿಡಿಸಲ್ಪಟ್ಟು

ಉಂಡೆಗಳಾಗಿ ಸುತ್ತಲ್ಪಟ್ಟು ಬುಟ್ಟಿಯೊಳಗೆ ಅಚ್ಚುಕಟ್ಟಾಗಿ ಜೋಡಿಸಲ್ಪಟ್ಟಿದ್ದವು.

ಆ ಕೂಡಲೇ ಅವಳು ನನ್ನ ಬಣ್ಣದ ದಾರಗಳನ್ನು ಉಂಡೆ ಸುತ್ತಿದವರಾರು ಎಂದು ಎಲ್ಲರನ್ನೂ ಕೇಳಿದಳು. ಯಾರು ಅವಳಿಗೆ ಉತ್ತರ ಕೊಡಲಿಲ್ಲ. ತನ್ನಷ್ಟಕ್ಕೆ ದಾರಗಳು ಉಂಡೆಯಾಗಿ ಸುತ್ತಿಕೊಳ್ಳಲು ಸಾಧ್ಯವೆ ? ನಿಮ್ಮಲ್ಲಿ ಅದಾರೋ ಸುತ್ತಿಟ್ಟಿದ್ದೀರಿ ಎಂದು ಅವಳು ಪುನಃ ಪ್ರತೀಯೊಬ್ಬರನ್ನೂ ಕೇಳಿದಳು. ಆ ಚಿಕ್ಕ ತಂಗಿಯರಲ್ಲಿ ಎಲ್ಲರಿಗೂ ಕಿರಿಯುವಳು ಬಹುಶಃ ಆ ಪುಟಾಣಿ ದಂತದಕ್ಕೆ ಉಂಡೆ ಸುತ್ತಿರಬೇಕು ಎಂದು ಉತ್ತರವಿತ್ತಳು. ಆ ಹುಡುಗಿಯು ಯಕ್ಷಿಣೀ ವಿದ್ಯೆಯನ್ನು ಯಾವಾಗಲೂ ನಂಬುತ್ತಿದ್ದಳು.



ಆ ಬಳಿಕ, ಅವರ ಮನೆಯಲ್ಲಿ ಜರುಗಿದ ಕೆಲವು ಸಂಭವಗಳಿಂದ ಆ ಪುಟ್ಟ ಹುಡುಗಿ ಹೇಳಿದುದನ್ನು ಎಲ್ಲರೂ ನಂಬಬೇಕಾಯಿತು.

ಇನ್ನೊಂದು ದಿನ ಪ್ರೆಯರೀಯ ಮನೆಯಲ್ಲಿ ಯಕ್ಷಿಣಿ ಸಂಭವಿಸಿತು. ಜೇಂಟಲ್, ಆ ದಂತದ ಕೈಯನ್ನು ತನ್ನ ಮೇಜಿನ ಮೇಲಿಟ್ಟಿದ್ದಳು. ಆ ಬಳಿಕ ಡ್ರಾಯರಿನೊಳಗೆ ತೆಗೆದಿಡಲು ಮರೆತುಬಿಟ್ಟಿದ್ದಳು. ಮರು ದಿನ ಆ ಮೇಜು ಜೋರಾಗಿ ಪಾಲಿಷ್ ಮಾಡಲ್ಪಟ್ಟು ಥಳ ಥಳ ಹೊಳೆಯುತ್ತಿತ್ತು. ಇನ್ನೊಂದು ಆಶ್ಚರ್ಯ. ಕೊಳಕು ಪಾತ್ರೆಗಳನ್ನು ತೊಳೆಯಲು ಅವರಮ್ಮ ತೊಟ್ಟಿಯಲ್ಲಿ ಆ ದಂತದ ಕೈಯನ್ನು ತಂದಿಟ್ಟಳು. ಮರುದಿನ ಬಂದು ನೋಡಿದರೆ ಏನಾಶ್ಚರ್ಯ ಆ ಪಾತ್ರೆಗಳೆಲ್ಲವೂ ಶುಭ್ರವಾಗಿ ತೊಳೆದು ಒರೆಸಲ್ಪಟ್ಟು, ಅಚ್ಚುಕಟ್ಟಾಗಿ ಜೋಡಿಸಲ್ಪಟ್ಟಿದ್ದವು. ಇದೀಗ ಆ ಮನೆಯಲ್ಲಿ ದಿನವೆಲ್ಲ ಈ ಪುಟಾಣಿ ದಂತದ ಕೈಯ ಮಾತೇ ಕೇಳಿ ಬರುತ್ತಿತ್ತು. 'ಜೇಂಟಲ್' ಅಮ್ಮನ ಹೊದಿಕೆಯನ್ನು ಇಸ್ತ್ರೀ, ಮಾಡಬೇಕು, ಕೊಂಚ ಆ ದಂತದ ಕೈ ಬೇಕು, ತೋಟದ ಸತ್ತೆಗಳನ್ನು ಕಿತ್ತು ಹಾಕಿ, ಪಾತಿ ಕಟ್ಟಿ ಚೊಕ್ಕಟ ಮಾಡಬೇಕು, ನನಗೆ ದಂತದ ಕೈ ಕೊಡೇ ? ಈ ರೀತಿ ಆ ದಂತದ ಕೈ ಯಾವಾಗಲೂ ಸದ್ದಿಲ್ಲದೆ, ಅತ್ಯಾಶ್ಚರ್ಯಕರವಾಗಿ ಕೆಲಸ ಮಾಡುತ್ತಿತ್ತು.

ಮೇ ತಿಂಗಳಲ್ಲಿ ರಮಣೀಯವಾದೊಂದು ದಿನ, ಬೆಳಗಿನ ಸಮಯ, ಪ್ರೇಯರೀಯ ಮನೆಯ ನೆರಮನೆಗೆ ಬೆಂಕಿ ಹತ್ತಿಕೊಂಡಿತ್ತು. ಆ ಮನೆಯ ಒಡೆಯನ ಹೆಸರು ಕ್ರಿಶ್ಚಿಯನ್ ಲೆಪೆಲ್ ಮಕ್ಕಳೊಂದಿಗೆ ಪಾಪ ಕೆಲವೇ ನಿಮಿಷಗಳಲ್ಲಿ ಆ ಮನೆಯು ಸುಟ್ಟು ಬೂದಿಯಾಯಿತು.

ಪ್ರೇಯರೀಯ ಹೆಣ್ಣು ಮಕ್ಕಳೂ ತಮ್ಮ ಮನೆಯ ತೋಟದ ಕಾರಂಜಿಯ ಹತ್ತಿರ ಗುಂಪುಗೂಡಿ, ನೆರಮನೆಯಲ್ಲಿ ಸಂಭವಿಸಿದ ಅನಾ

ಹುತವನ್ನು ಕುರಿತಾಗಿ ಮಾತನಾಡುತ್ತಿದ್ದರು. ಸಮೀಪದಲ್ಲೆ ಹುಲ್ಲಿನ ಮೇಲೆ ಮಲಗಿದ್ದ ಜಾನೀ ಲೂಸ್ ಅವರ ಸಂಭಾಷಣೆಯನ್ನು ಆಲಿಸುತ್ತಿದ್ದನು. ಅವರ ಮಾತುಗಳು ಅವನಿಗೆ ಪ್ರಿಯವಾಗಿತ್ತು.

ಸೆಸಿಲಿಯು, ಆ ಕುಟುಂಬಕ್ಕೆ ನಾವೇನಾದರೂ ಉಪಕಾರ ಮಾಡಬೇಕಮ್ಮ ಹೇಗೆ ಮಾಡುವುದು ?



ಇನ್ನೊಬ್ಬಳು ನಮಗಿರುವ ಉಡುಪುಗಳಲ್ಲಿ ಅರ್ಧ ಭಾಗವನ್ನೆಲ್ಲ ಅವರಿಗೆ ಕೊಟ್ಟುಬಿಡೋಣ.

ಮತ್ತೊಬ್ಬಳು 'ನಾವು ತಿನ್ನುವ ಮಿಠಾಯಿ'ಗಳಲ್ಲಿ ಸರಿಪಾಲು ಅವರಿಗೆ ಕೊಟ್ಟರಾಯಿತು.

ಆಗ ಸೆಸಿಲಿಯು ಈ ದಂತದ ಕೈಯನ್ನು ಅವರಿಗೆ ಕೊಂಚ ಎರವಲಾಗಿ ಕೊಟ್ಟರಾಯಿತು. ಅದು ಅವರಿಗೆ ಚಳಿಗಾಲದಲ್ಲಿ ನೀರು ಕಾಯಿಸಲು ಬೆಂಕಿ ಹೊತ್ತಿಸಲು, ಸೌದೆ ಶೇಖರಿಸಿಕೊಳ್ಳಲು ನೆರವಾಗುತ್ತೆ;

ಅವರಿಗೊಂದು ಹೊಸ ಮನೆಯನ್ನು ಕಟ್ಟಿಕೊಡುತ್ತ್ತ, ಅವರ ತೋಟವನ್ನು ಪುನರ್ ನಿರ್ಮಾಣ ಮಾಡಿ ತೋಟದಲ್ಲಿ ಹೊಸ ಸಸಿಗಳನ್ನು ನೆಟ್ಟು ಬೆಳೆಸಲು ನೆರವಾಗುತ್ತೆ.. ಯಾಕೆ ದಂತದ ಕೈ ಈ ಕುಟುಂಬದ ಕೆಲಸ ಕಾರ್ಯಗಳೆಲ್ಲದರಲ್ಲೂ ನೆರವಾಗಿ ಅವರಿಗೆ ಉತ್ತೇಜನ ಕೊಡಬಲ್ಲದು ಎಂದು ಮಾತು ಮುಗಿಸಿದಳು.

ಆ ಕೂಡಲೇ ಅವರೆಲ್ಲರಿಗೂ ಕಿರಿಯವಳಾದ ಹುಡುಗಿಯು ಅಳಲು ಪ್ರಾರಂಭಿಸಿದಳು.

'ಏನಾಯಿತು' ಹೇಳು ಎಂದು ಸೆಸಿಲಿಯು ತಂಗಿಯನ್ನು ಮೆಲ್ಲನೆ ಕೇಳಿದಳು. "ನಾನು... ನಾನು... ಮತ್ತೆ... ನಾನು..."

ಸರಿ ನೀನು ಏನನ್ನು ಮಾಡಿಬಿಟ್ಟೆ ?

"ಈ ಬೆಳಿಗ್ಗೆ ನಾನು ಕೊಳದಲ್ಲಿ ಅದನ್ನು ಕಳೆದುಕೊಂಡೆ" ಎಲ್ಲರೂ ಗಾಬರಿಗೊಂಡರು. ಆ ಪುಟಾಣಿ ದಂತದ ಕೈ...ಅವರ ನೆಚ್ಚಿನ ಮುದ್ದು ದಂತದ ಕೈ, ಇದೀಗ ಅವರಿಗೆ ಅದು ಅತ್ಯಂತ ಅವಶ್ಯಕವಾಗಿ ಬೇಕೆಂದಾಗ, ಈ ಹುಡುಗಿ ಅದನ್ನು ಕಳೆದುಬಿಟ್ಟಳಲ್ಲ,

ಮತ್ತೆ ನಾವೀಗ ಏನನ್ನು ಮಾಡುವುದು ?

ಆಗ ಜೇಂಟಲ್ ಅದಂತೂ ಬಹಳ ಸಣ್ಣ ಕೈ ಅದು ಮಾಡುತ್ತಿದ್ದ ಕೆಲಸವನ್ನು ನಾವೆಲ್ಲರೂ ಮಾಡಬಲ್ಲೆವು.

ಯಾಕೇ ಆಗಬಾರದು ? ನಮ್ಮಿಂದ ಅವರಿಗೆ ದಂತದ ಕೈಯನ್ನು ಕೊಡಲು ಸಾಧ್ಯವಾಗಲಿಲ್ಲ. ನಮ್ಮ ಸ್ವಂತ ಕೈಯನ್ನೇ ಅವರ ಉಪಯೋಗಕ್ಕೆ ಕೊಡೋಣ.

ಆದರೆ ನಾನು ನನ್ನ ಕೈಗಳನ್ನು ಕಡಿದುಕೊಡಲಾರೆ, ಎಂದು ಅವರಲ್ಲಿ ಎಲ್ಲರಿಗೂ ಕೊನೆಯವಳಾದ ಪುಟ್ಟ ಹುಡುಗಿಯು ಗಾಬರಿಯಿಂದ ನುಡಿದಳು.

ಲೆ ದಡ್ಡಿ ಸುಮ್ಮನೆ ನಮ್ಮ ಸಂಗಡ ನೀನು ಬಂದರೆ ಸಾಕು. ನಿಮ್ಮಲ್ಲಿ ಗಟ್ಟಿಮುಟ್ಟಾಗಿರುವರು ಮನೆಯನ್ನು ಮತ್ತೆ ಕಟ್ಟಲು ಕ್ರಿಶ್ಚಿಯನ್ ಮಾವನಿಗೆ ಒತ್ತಾಸೆ ಮಾಡಿ ಕೆಲವರು ಕಾಡಿನಿಂದ ಮರದ ತುಂಡುಗಳನ್ನು ತರಲು ಸಹಾಯ ನೀಡಿರಿ. ಜೇಂಟಲ್, ನೀನೂ ಅವರ ಮನೆಯ ಉಡುಪುಗಳನ್ನು ಹೊಲಿಯುವುದರಲ್ಲಿ ಮಿಸಸ್ ಕ್ರಿಶ್ಚಿಯನ್ ಮಾಮಿಗೆ ನೆರವಾಗು. ನಿಕೋಲೆಯೂ, ನಾನೂ ಆ ಕುಟುಂಬದ ಪ್ರತಿಯೊಂದು ಕಾರ್ಯದಲ್ಲೂ ಸಾಧ್ಯವಾದಷ್ಟು ಸಹಾಯ ಮಾಡುತ್ತೇವೆ" ಎಂದು ಹೇಳಿದರು.

ಅದೇ ರೀತಿಯಲ್ಲಿ ಅವರೆಲ್ಲರೂ ನೆರಮನೆಯ ಕ್ರಿಶ್ಚಿಯನ್ ಮಾಮನ ಮನೆಯ ಪುನರ್ ನಿರ್ಮಾಣ ಕೆಲಸದಲ್ಲಿ ನೆರವಾಗಿನಿಂತರು. ಎಲ್ಲರೂ ಕೂಡಿ ಮನಸಾರೆ ಕೆಲಸ ಮಾಡಿದರೆನ್ನಿ.

ಶೀಘ್ರದಲ್ಲೇ ಅವರೆಲ್ಲರೂ ನೆರಮನೆಯ ಮಾಮನ ಮಕ್ಕಳೊಡನೆ ಸ್ನೇಹ ಬೆಳಸಿದರು. ಕೆಲವು ದಿನಗಳೊಳಗಾಗಿ ನಾವು ಆ ದಂತದ ಕೈ

ಯನ್ನು ಕಳೆದುಕೊಂಡಿದ್ದು ಒಳ್ಳೆಯದೆ ಆಯಿತೆಂದು ಆ ಮಕ್ಕಳಿಗೆ ಅರಿವಾಯಿತು. ಅದರಿಂದಲ್ಲವೇ ಅವರೆಲ್ಲರೂ ಈಗ ನೆರಮನೆಯ ಮಾಮನಿಗೆ ಸ್ವಂತ ಸಹಾಯ ನೀಡಲು ಅವಕಾಶ ದೊರಕಿತು. ಅವರೆಲ್ಲರೂ ದಿನ ಪೂರ್ತಿ, ನೆರಮನೆಯ ಮಕ್ಕಳೊಡನೆ ತಮಾಷೆಯಾಗಿ ಮಾತನಾಡುತ್ತ ನಲಿಯುತ್ತ, ಕೆಲಸ ಮಾಡುತ್ತಿದ್ದರು. ಇದರಿಂದ ಕ್ರಿಶ್ಚಿಯನ್ ಮಾಮನಿಗೂ ಪುನರ್ ಆಕಾಂಕ್ಷೆ ಮೂಡಿತು.

ಒಂದು ರಾತ್ರಿ ಆ ಪುಟ್ಟ ಜ್ಞಾನಿಯು ಆ ಏಳು ಮಕ್ಕಳು ವಾಸವಾಗಿದ್ದ ಮನೆಯೊಳಗೆ ನುಗ್ಗಿದನು. ಆಗ, ಮೇಜಿನ ಡ್ರಾಯರೊಳಗಿದ್ದ ಥಳಥಳಿಸುವ ಬೀಗದ ಕೈ ಸಹಿತವಾಗಿ ಆ ಪೆಟ್ಟಿಗೆಯನ್ನೂ, ಹೊಲಿಗೆಯ ಬುಟ್ಟಿಯೊಳಗಿದ್ದ ಬೆಳ್ಳಿಯ ಬೆರಳಿನ ಕವಚವನ್ನೂ ತೆಗೆದುಕೊಂಡು ಓಡಿಬಿಟ್ಟನು.

ಆ ಬಳಿಕ, ಆ ಏಳು ಹೆಣ್ಣು ಮಕ್ಕಳೂ, ಅವರ ತಾಯಿ ತಂದೆಯರೂ ಬಹುಕಾಲ ಸುಖವಾಗಿ ಬಾಳಿದರು.

ಸಂಗ್ರಹಕಾರರು : ಶ್ರೀಮತಿ ಮೈಥಿಲಿ ಸಂಪತ್

ತರ್ಜುಮೆ : ಶ್ರೀಮತಿ ಜಯಲಕ್ಷ್ಮಿ ಶ್ರೀನಿವಾಸನ್

Printed at the Evangelical Literature Service Press
St. John's Church Road, Bangalore-560005

